17

# ಅಚಲ

ಬಿಡಿಪ್ರತಿ : 4 ರೂ. ತಿಂಗಳ ಪತ್ರಿಕೆ ಆಗಸ್ಟ್ - 2006

ಒಳಗೇನಿದೆ


- ಆಭರಣ, ಕೊಳ್ಳುಬಾಕ ಸಂಸ್ಕೃತಿ ಮತ್ತು ಮಹಿಳೆ (ಕಥೆ) - ಶಾಂತಾನಾಗರಾಜ್
- ಹೆಣ್ಣು ಮತ್ತು ಮೌನ - ಡಾ. ಎಂ. ಎಸ್. ಆಶಾದೇವಿ
- ಅಯ್ಯಪ್ಪನ ಅವಾಂತರ - ಶಾಂತಾಮಣಿ






ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ,
ಬೆಂಗಳೂರು

# ಅಚಲ

ಸಂಪುಟ - 21 ಸಂಚಿಕೆ : 2

*ಸಂಪಾದಕ ಮಂಡಳಿ*

ಎನ್. ಗಾಯತ್ರಿ

ನೇಮಿಚಂದ್ರ, ದೇವಿ

ಶಾಂತಾ ನಾಗರಾಜ್

ಹೆಚ್.ಎನ್. ಗೀತಾ

ಹೇಮಲತಾ ಮಹಿಷಿ

*ಪ್ರಕಾಶಕರು*

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ, ಬೆಂಗಳೂರು


ಚಂದಾ ಹಣವನ್ನು ಚೆಕ್‌ನಲ್ಲಿ ಕಳುಹಿಸುವವರು ಬ್ಯಾಂಕ್ ಕಮೀಷನ್ ಸೇರಿಸಿ ಕಳುಹಿಸಬೇಕು. ಎಂ.ಓ. ಫಾರ್ಮಿನ ಕೊನೆಯ ಭಾಗದಲ್ಲಿ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ನಮೂದಿಸಬೇಕು. ಬದಲಾದ ವಿಳಾಸವನ್ನು ದಯವಿಟ್ಟು ಬರೆದು ತಿಳಿಸಿ.


**Achala - Edited by Dr. N. Gayathri**

**Published by Dr. G. Ramakrishna on behalf of Jagruthi Mahila Adhyayana Kendra**

**Printed at**
Lipi Mudrana
**Bangalore - 560 004**


''ಜಪಾನಿನಲ್ಲಿ ನನ್ನ ಗಮನ ಸೆಳೆದ ಇನ್ನೊಂದು ಪ್ರಮುಖ ಸಂಗತಿಯೆಂದರೆ ಕ್ರಿ.ಶ. 1900ರ ಹೊತ್ತಿಗೆ ಅಲ್ಲಿನಡೆದ ಮಹಿಳಾ ಶೈಕ್ಷಣಿಕ ಪ್ರಗತಿ. ಆಗಲೇ ಆದೇಶದಲ್ಲಿ ಶಾಲೆಗೆ ಹೋಗುತ್ತಿದ್ದ ಹೆಣ್ಣು ಮಕ್ಕಳ ಸಂಖ್ಯೆ ಒಂದೂವರೆ ದಶಲಕ್ಷ. ಆಗಿನ ಸಂದರ್ಭದಲ್ಲೇ ಭಾರತದ ಜನಸಂಖ್ಯೆ ಜಪಾನಿಗಿಂತ ಅತ್ಯಧಿಕ! ಆದರೂ ನಮ್ಮ ಇಡೀ ಭರತ ಖಂಡದಲ್ಲಿ ಕೇವಲ ನಾಲ್ಕು ಲಕ್ಷ ಹೆಣ್ಣು ಮಕ್ಕಳು ಶಾಲೆಗೆ ಹೋಗುತ್ತಿದ್ದರು! ಅವರಲ್ಲೂ ವಿದ್ಯೆಯನ್ನು ಅರ್ಧಕ್ಕೆ ಬಿಡುವವರ ಸಂಖ್ಯೆಯೇ ಅಧಿಕ! ವಿದೇಶಿಯರು ಶಿಕ್ಷಣಕ್ಕೆ ನೀಡುವ ಮಹತ್ವವನ್ನು ಕಂಡು ನಾನು ಪ್ರಭಾವಿತನಾಗುತ್ತೇನೆ. ಅನಕ್ಷರತೆಯೇ ನಮ್ಮ ದೇಶದ ಆರ್ಥಿಕ ಅವನತಿಗೆ ಮೂಲ ಕಾರಣವಾಗಿದೆ.''

ಸರ್. ಎಂ. ವಿಶ್ವೇಶ್ವರಯ್ಯ.
(ನನ್ನ ವೃತ್ತಿ ಜೀವನದ ನೆನಪುಗಳು - ಕೃತಿಯಲ್ಲಿ)


**ಅಚಲ ವಿಳಾಸ**

**108, ಸ್ಕೈಲೈನ್ ಸುರಭಿ, 14-ಪಿ, ವಿದ್ಯಾಪೀಠ ರಸ್ತೆ, ಬನಶಂಕರಿ 3ನೇ ಹಂತ, ಬೆಂಗಳೂರು - 560 085.**

## ಸಂಪಾದಕೀಯ

''ಸ್ವಾತಂತ್ರ್ಯ ಹೋರಾಟಗಾರರೆಲ್ಲ ಇತಿಹಾಸದ ಪುಟ ಸೇರುತ್ತಿದ್ದಾರೆ. ರಾಜಕಾರಣ, ರಾಷ್ಟ್ರ ಪ್ರೇಮವನ್ನು ನುಂಗಿಹಾಕುತ್ತಿದೆ. ಒಗ್ಗಟ್ಟು ಕಡಿಮೆಯಾಗುತ್ತಿದೆ. ಆಧುನೀಕರಣ ಹಾಗೂ ವ್ಯಾಪಾರೀಕರಣದ ಛಾಪು ಎಲ್ಲೆಡೆ ಹರಡುತ್ತಿದೆ. ಇದು ದೇಶದ ಸಂಸ್ಕೃತಿ ಹಾಗೂ ದೇಶ ಪ್ರೇಮಕ್ಕೆ ಮಾರಕ. ಹೀಗೆಯೇ ಮುಂದುವರೆದರೆ ಮುಂದೊಂದು ದಿನ ಮತ್ತೆ ವಿದೇಶೀಯರೇ ನಮ್ಮನ್ನಾಳುವ ಪರಿಸ್ಥಿತಿ ಎದುರಾಗುತ್ತದೆ'' ಎಂದು ತಮ್ಮ ನೂರನೇ ವಯಸ್ಸಿನಲ್ಲೂ ದೇಶ ಪ್ರೇಮಕ್ಕಾಗಿ ಮರುಗಿದ ಜೀವ ಮಹಾದೇವಿ ತಾಯಿಯದು. ಅವರು ಮುಂದುವರೆದು ಹೇಳುತ್ತಾರೆ ''ಹಿಂದೆ ಮಹಿಳೆಯರು ಸಾಕ್ಷರರಾಗಿರಲಿಲ್ಲ. ಆದರೆ ದೇಶ ಪ್ರೇಮಕ್ಕೆ ಕೊರತೆ ಇರಲಿಲ್ಲ. ಅದು ಅವರಲ್ಲಿ ರಕ್ತಗತವಾಗಿತ್ತು. ಇಂದು ಮಹಿಳೆ ಸಬಲೆ. ಆದರೆ ಸಂಸ್ಕೃತಿ, ರಾಷ್ಟ್ರ ಪ್ರೇಮವನ್ನು ಮರೆತು ಕುಟುಂಬ ಸ್ವಾರ್ಥವನ್ನು ಮೈಗೂಡಿಸಿಕೊಳ್ಳುತ್ತಿದ್ದಾಳೆ. ಹೆಣ್ಣು ಎನ್ನುವುದನ್ನು ಲೆಕ್ಕಿಸದೆ ರಾತ್ರಿ ಹಗಲೆನ್ನದೆ ಬ್ರಿಟಿಷರ ಆಡಳಿತದ ವಿರುದ್ಧ ಉಪ್ಪಿನ ಸತ್ಯಾಗ್ರಹದಿಂದ ಹಿಡಿದು ಅನೇಕ ಸತ್ಯಾಗ್ರಹಗಳಲ್ಲಿ ಪಾಲ್ಗೊಂಡು ನಾನು ಜೈಲು ಸೇರಿದ್ದೆ. ಕಾರಾಗೃಹದಲ್ಲಿ ಮಹಿಳೆಯರಿಗೆ ವಿದ್ಯಾಭ್ಯಾಸದ ಮಹತ್ವ ತಿಳಿಸಿ ಭಗವದ್ಗೀತೆ ಕಂಠಪಾಠ ಮಾಡಿಸಿ ಅವರಿಗೆ ಧೈರ್ಯ ತುಂಬುತ್ತಿದ್ದೆ..... ಆದರೆ ಇಂದು ರಾಷ್ಟ್ರದ ಮಹಿಳಾ ನಾಯಕಿಯರು ಏನು ಮಾಡುತ್ತಿದ್ದಾರೆ. ಕನಿಷ್ಠ ಪಕ್ಷ ಮಹಿಳೆಯರನ್ನು ಸರಕಾರ ಗುರುತಿಸುವಂತೆ ಮಾಡುವುದರಲ್ಲಿಯೂ ಈ ಜನ ವಿಫಲರಾಗಿದ್ದಾರೆ. ಇದೇ ಏನು ರಾಷ್ಟ್ರ ರಾಜಕಾರಣದಲ್ಲಿ ಮಹಿಳೆಯರ ಪಾತ್ರ?'' ಎಂದು ನೊಂದು ಪ್ರಶ್ನಿಸುತ್ತಾರೆ.

ತಮ್ಮ ಉಸಿರಿನ ಕೊನೆಯ ಕ್ಷಣದವರೆಗೆ ರಾಷ್ಟ್ರಕ್ಕಾಗಿ ಚಿಂತಿಸಿದ ಮಹಾನ್ ಮಹಿಳೆ ಮಹಾದೇವಿ ತಾಯಿ 2006ರ ಆಗಸ್ಟ್ 8ರಂದು ನಮ್ಮನ್ನಗಲಿದರು. ಸಾವು ಎದುರಾಗುವವರೆಗೆ ಅವರ ಉತ್ಸಾಹ ಕುಗ್ಗಿರಲಿಲ್ಲ. ನೆನಪಿನ ಶಕ್ತಿ ಮಾಸಿರಲಿಲ್ಲ. ಮನುಷ್ಯ ಪ್ರೀತಿ ಬತ್ತಿರಲಿಲ್ಲ. ದೇಶ ಪ್ರೇಮದ ಭಾವೋದ್ವೇಗ ಮರೆಯಾಗಿರಲಿಲ್ಲ. ಯಾವ ಆಡಂಬರಗಳಿಗೆ ಮಣಿಯದೇ ಎಲೆ ಮರೆ ಹೂವುನಂತೆ ರಾಷ್ಟ್ರ ಪ್ರೇಮವನ್ನು ದಶದಿಕ್ಕುಗಳಿಗೂ ಪಸರಿಸಿದ ಹಿರಿಯ ಜೀವ ನಮ್ಮಿಂದ ಮರೆಯಾಗಿದೆ. ಹಿಂದೊಮ್ಮೆ ನಮ್ಮ 'ಜಾಗೃತಿ ಮಹಿಳಾ ಅಧ್ಯಯನ'ದ ವೇದಿಕೆಗೆ ಆದರದಿಂದ ಆಗಮಿಸಿ ನಮ್ಮ 'ಅಚಲಾ'ವನ್ನೂ ನಮ್ಮ ಜಾಗೃತಿಯ ಕೆಲಸಗಳನ್ನೂ ಮನಸಾರೆ ಮೆಚ್ಚಿಕೊಂಡು ಉತ್ತೇಜನದ ಮಾತುಗಳನ್ನಾಡಿದ ಹಿರಿಯಜ್ಜಿಯ ಆತ್ಮಕ್ಕೆ ಶಾಂತಿಸಿಗಲಿ ಎಂದು ಅಚಲಾ ಬಳಗ ಅಶ್ರು ತರ್ಪಣವನ್ನು ಅರ್ಪಿಸುತ್ತದೆ.

ಇರುವ ಕೆಲಸವ ಮಾಡು ಕಿರಿದೆನದೆ ಮನವಿಟ್ಟು

ದೊರೆತುದ ಹಸಾದವೆಂದುಣ್ಣುಗೊಣಗಿಡದೆ।

ಧರಿಸು ಲೋಕದ ಭರವ ಪರಮಾರ್ಥವನು ಬಿಡದೆ

ಹೊರಡು ಕರೆ ಬರಲ್ ಅಳದೆ - ಮಂಕುತಿಮ್ಮ

ಸಂ.

# ಆಭರಣ, ಕೊಳ್ಳುಬಾಕ ಸಂಸ್ಕೃತಿ ಮತ್ತು ಮಹಿಳೆ

- ಶಾಂತನಾಗರಾಜ್

ಗೃಹಿಣಿ ಮತ್ತು ಆಭರಣ

'ಇಟ್ಟು ತೊಟ್ಟು ಮಾಡಿದರೆ ಪುಟ್ಟಕ್ಕ ಚೆಂದ' ಅನ್ನುವುದು ಒಂದು ಗಾದೆ. ಆಭರಣಗಳು ಮಹಿಳೆಗೆ ಶೋಭೆಯನ್ನು ತಂದುಕೊಡುತ್ತವೆ ಎಂದು ಬಲವಾಗಿ ನಂಬಿರುವವರು ನಾವು. ಪ್ರಪಂಚದ ಎಲ್ಲ ರಾಷ್ಟ್ರಗಳಲ್ಲಿಯೂ 'ಬಂಗಾರ' ಎನ್ನುವುದು ಆರ್ಥಿಕ ವ್ಯವಸ್ಥೆಯ ಬೆನ್ನುಹುರಿಯಂತೆ ಎಂದು ಅರ್ಥೈಸಿದರೆ, ಭಾರತದ ದೃಷ್ಟಿಯಲ್ಲಿ ಮಾತ್ರ ಬೆನ್ನುಹುರಿ ಅಷ್ಟೇ ಅಲ್ಲ ಕಣ್ಣಿಗೂ ಮನಸ್ಸಿಗೂ ಹಬ್ಬ. ಪ್ರಪಂಚದ ಯಾವ ರಾಷ್ಟ್ರದ ಮಹಿಳೆಯೂ ಭಾರತೀಯ ಮಹಿಳೆಯಷ್ಟು ಆಭರಣಗಳನ್ನು ಧರಿಸುವುದಿಲ್ಲ. ಸಿಂಗಪುರ, ಮಲೇಷಿಯಾ, ಥೈಲ್ಯಾಂಡ್ ದೇಶಗಳಲ್ಲಿಯೂ ಬಂಗಾರದ ಅಂಗಡಿಗಳು ನಮ್ಮಲ್ಲಿಯಂತೇ ಇರುತ್ತವಾದರೂ ಅಲ್ಲಿಯ ಮಹಿಳೆಯರು ನಮ್ಮಂತೆ ಒಟ್ಟೊಟ್ಟಿಗೆ (ಅಂದರೆ ನಾಲ್ಕಾರು ಸರಗಳು, ಹತ್ತಾರು ಬಳೆಗಳು ಇತ್ಯಾದಿ) ಧರಿಸುವುದಿಲ್ಲ. ಮಲ್ಲೈ ಮಹಿಳೆಯರು ಕೈಗೆ ಮಾತ್ರ ಬಳೆಗಳನ್ನು ಧರಿಸುತ್ತಾರೆ. ಕಿವಿ, ಕುತ್ತಿಗೆಗಳು ಬಟ್ಟೆಯಿಂದ ಮುಚ್ಚಿರುತ್ತವಾದ್ದರಿಂದ ಅಲ್ಲಿಗೆ ಆಭರಣ ಬೇಕಿಲ್ಲ.

ಕೆಲವೇ ಶತಕಗಳ ಹಿಂದೆ ಭಾರತೀಯ ಪುರುಷನೂ ಮಹಿಳೆಯಂತೆಯೇ ಆಭರಣ ಪ್ರಿಯನಾಗಿದ್ದ. ಪ್ಯಾಂಟು ಶರ್ಟ್‌ಗಳ ಪಾಶ್ಚಾತ್ಯೀಕರಣಕ್ಕೆ ಬಲಿಯಾದ ಮೇಲೆ ಈ ದಿರಸಿಗೆ ಆಭರಣ ಹೊಂದುವುದಿಲ್ಲವೆಂದೋ ಏನೋ ಪುರುಷರು ಬಂಗಾರದ ಮೋಹ ಕಳಚಿಕೊಂಡರು. ಭಾರತೀಯ ನಾರಿಯರಿಗೆ ಮಾತ್ರ ಅದು ಬಿಡಲಾರದ ನಂಟಿನಂತೆ ಅಂಟಿದೆ. ನಾವು ಯಾವುದೇ ಮಹಿಳೆಯನ್ನು ಬರಿಗಿವಿ, ಬರಿಕುತ್ತಿಗೆ, ಬರಿಗೈಗಳಲ್ಲಿ ಕಲ್ಪಿಸಿಕೊಳ್ಳಲಾರೆವು. ವಿಧವೆಯರಿಗೆ ಇದನ್ನು ನಿಷೇಧಿಸಿದಾಗ ಸಾಮಾಜಿಕ ಕಳಕಳಿ ಮತ್ತು ಮಾನವೀಯತೆ ಇರುವವರಿಗೆ ಇದು ಕ್ರೌರ್ಯವೆಂದೇ ಎನಿಸಿತು. 'ಅವರಿಗೂ ಆಭರಣ ಧರಿಸುವ ಹಕ್ಕಿದೆ' ಎಂದೇ ಈ ವರ್ಗ ಭಾವಿಸಿದ್ದು, ಕರೆನೀಡಿದ್ದು, ಕೇಶಮುಂಡನದಂಥ ಅನಿಷ್ಠ ಪದ್ಧತಿ ತೊಡೆದು ಹಾಕಲು ಶ್ರಮಿಸಿದ್ದು, ಎಲ್ಲವೂ ಮಾನವೀಯ ನೆಲೆಯಲ್ಲಿ 'ಸರಿ' ಎಂದೇ ಭಾವಿಸಬೇಕು.

ಆದರೆ ಆಭರಣಗಳು ಮಹಿಳೆಗೆ ಕೇವಲ ಭೂಷಣ ಮಾತ್ರವಾಗಿದ್ದುದು ಇದೀಗ ಪ್ರದರ್ಶನಗಳ ಹೊರೆ ಯಾಕೆ ಆಯಿತು ಎನ್ನುವ ಪ್ರಶ್ನೆ ನಮಗೆ ನಾವೇ ಇಂದು ಕೇಳಿಕೊಳ್ಳಬೇಕಾಗಿದೆ. ಈಗ್ಗೆ ಕೇವಲ ಐವತ್ತು ಅರವತ್ತು ವರ್ಷಗಳ ಹಿಂದೆ ಇಂದಿನಂತೆ ಹೊರೆ ಹೊರೆ ಆಭರಣಗಳನ್ನು ಅತ್ಯಂತ ಶ್ರೀಮಂತರೂ ಧರಿಸುತ್ತಿರಲಿಲ್ಲ ಎನ್ನುವುದನ್ನು ಎಷ್ಟು ಜನ ಗಮನಿಸಿದ್ದಾರೋ ಗೊತ್ತಿಲ್ಲ. ನಾಟಕ ಮತ್ತು ಸಿನಿಮಾ ಪ್ರಭಾವಗಳು ಹೆಚ್ಚಾಗತೊಡಗಿದಂತೆ ಮದುಮಗಳನ್ನು ವಿಪರೀತ ಸಿಂಗರಿಸುವುದು ಪರಿಪಾಠವಾಯಿತು. ಜೊತೆಯಲ್ಲಿಯೇ ಮದುವೆ ಮನೆಗೆ ಬರುವ ಇತರ ಮಹಿಳೆಯರೂ ಸಿಂಗರಿಸಿಕೊಳ್ಳತೊಡಗಿ, ಬಂಗಾರದ ಮೋಹ ಸಾಂಕ್ರಾಮಿಕ ರೋಗದಂತೆ ಸಮಾಜದಲ್ಲಿ ಹರಡತೊಡಗಿದೆ.

ಇವತ್ತು ಹೊರೆ ಹೊರೆ ಆಭರಣ ಧರಿಸುವ ಮಹಿಳೆಯರು ತಮ್ಮ ವಿವೇಕವನ್ನು ಜಾಗೃತಗೊಳಿಸಿಕೊಂಡು ಬಂಗಾರದ ಬಗ್ಗೆ ಮರುಚಿಂತನೆ ನಡೆಸಬೇಕು. ಆಭರಣಗಳನ್ನು ಮದುವೆ ಮುಂತಾದ ಸಮಾರಂಭಗಳಲ್ಲಿ ಅತಿ ಹೆಚ್ಚು ಕಾಣುವಂತೆ ನಾವು ಯಾಕೆ ಧರಿಸಬೇಕು? ಇದು ಒಂದು ಬಹುಮುಖ್ಯ ಪ್ರಶ್ನೆ. ಇದಕ್ಕೆ ಮಹಿಳೆಯರು ಕೊಡುವ ಉತ್ತರಗಳನ್ನು ಊಹಿಸಿ ನಾವೇ ಬರೆದು ಆ ಉತ್ತರಗಳಲ್ಲಿ ಎಷ್ಟು ಹುರುಳಿದೆ ಎನ್ನುವುದನ್ನು ವಿಶ್ಲೇಷಣೆ ಮಾಡೋಣ.

**ಉತ್ತರ 1** : ಸಮಾರಂಭಗಳಲ್ಲಿ ಮಹಿಳೆ ಅಭರಣಗಳನ್ನು ಧರಿಸಲೇಬೇಕು ಇಲ್ಲದಿದ್ದರೆ ಚೆಂದ ಕಾಣುವುದಿಲ್ಲ.

**ವಿಶ್ಲೇಷಣೆ** : ಒಬ್ಬ ವ್ಯಕ್ತಿ ಆಭರಣಗಳಿಂದಲೇ 'ಚೆಂದ' ಕಾಣಬೇಕೆ? ಕಿವಿಗೆ ಓಲೆ, ಕುತ್ತಿಗೆಗೆ ಒಂದೇ ಎಳೆ ಸರ ಕೈಗೊಂದೇ ಬಳೆ ಧರಿಸಿದ ಮಹಿಳೆಯೂ ಸುಂದರವಾಗಿಯೇ ಕಾಣುತ್ತಾಳಲ್ಲ? ಎಷ್ಟೋ ವೇಳೆ ಹೊರೆ ಹೊರೆ ಆಭರಣ ತೊಟ್ಟವರೂ ಸುಂದರಿಯರಾಗಿ ಕಾಣುವುದೇ ಇಲ್ಲ. ಬದಲಿಗೆ ಆ ಆಭರಣಗಳು ಅವರ ಸಹಜ ಶೋಭೆಯನ್ನು ಮುಚ್ಚಿ ಹಾಕಿಬಿಡುತ್ತವೆ. ಸೌಂದರ್ಯ ಇರುವುದು ನೋಡುಗರ ಕಣ್ಣಲ್ಲಿ!

**ಉತ್ತರ 2** : ಆಭರಣಗಳು ಮಹಿಳೆಯರ ಅಂತಸ್ತನ್ನು ಹೆಚ್ಚಿಸುತ್ತವೆ.

**ವಿಶ್ಲೇಷಣೆ :** ಇವತ್ತು ಮಾರುಕಟ್ಟೆಯಲ್ಲಿ ಬಂಗಾರದ ತಲೆಯ ಮೇಲೆ ಹೊಡೆದಂತಹ ನಕಲಿ ಆಭರಣಗಳು ಬಂದಿವೆ. ಬಂಗಾರದ ಪಕ್ಕದಲ್ಲಿಟ್ಟರೂ ಗುರುತಿಸಲಾಗದಷ್ಟು ಒಂದೇ ರೀತಿ ಇರುತ್ತವೆ. ಪರಿಸ್ಥಿತಿ ಹೀಗಿರುವಾಗ ಬಂಗಾರದಿಂದ ಅಂತಸ್ತು ಏರುತ್ತದೆ ಎಂದು ಹೇಗೆ ನಂಬುವುದು? ಅಂತಸ್ತು ಏರುವುದು ನಮ್ಮ ಹೃದಯವಂತಿಕೆಯಿಂದಲ್ಲವೇ?

**ಉತ್ತರ 3 :** ಎಲ್ಲರೂ ಧರಿಸುವಾಗ ನಾವು ಧರಿಸದಿದ್ದರೆ ಮರ್ಯಾದೆ ಸಿಗುವುದಿಲ್ಲ.

**ವಿಶ್ಲೇಷಣೆ :** ನಿಜ. ಈ ಮಾತನ್ನು ಸ್ವಲ್ಪ ಕೂಲಂಕಷವಾಗಿ ಚರ್ಚಿಸಬೇಕು. ಒಡವೆಗಳನ್ನು, ಒಳ್ಳೆ ಸೀರೆಗಳನ್ನು ಧರಿಸಿದವರಿಗೆ ಅತಿ ಮರ್ಯಾದೆ ಕೊಡುವುದನ್ನೂ, ಸಾಧಾರಣವಾಗಿ ಸಮಾರಂಭಗಳಿಗೆ ಹೋದರೆ (ಬಡವರೆಂದು ತೋರಿದರೆ) ಅನಾದರ ಮಾಡುವುದನ್ನೂ ನಾನೇ ಕಣ್ಣಾರೆ ಕಂಡಿದ್ದೇನೆ. ಇದನ್ನೂ ನಾವು ಮಹಿಳೆಯರು ಮನಸ್ಸು ಮಾಡಿದರೆ ಬದಲಿಸಬಹುದು. ನಮ್ಮ ಒಡವೆ ಸೀರೆಗಳಿಂದ ಮಾತ್ರ ನಮಗೆ ಮರ್ಯಾದೆ ಸಿಗುವುದಾದರೆ ಅದು ನಿಜವಾದ ಮರ್ಯಾದೆಯೇ? ಮರ್ಯಾದೆ ಎನ್ನವುದು ನಮ್ಮ ವ್ಯಕ್ತಿತ್ವಕ್ಕೆ ಸಿಗಬೇಕು. ನಮ್ಮ ವಿದ್ಯೆಗೆ, ವಿವೇಕಕ್ಕೆ, ನಡೆವಳಿಕೆಗೆ ಸಿಗಬೇಕು. ತುಂಬಾ ಆಭರಣ ಧರಿಸಿದ ಮಹಿಳೆ ಚೆಲ್ಲುಚೆಲ್ಲಾಗಿ ಆಡುತ್ತಿದ್ದರೆ, ಅನಗತ್ಯವಾಗಿ ಜಗಳವಾಡುವ ನಡೆವಳಿಕೆಯುಳ್ಳವಳಾಗಿದ್ದರೆ, ಇತರರನ್ನು ಹೀನಾಯವಾಗಿ ಕಾಣುವ ಗುಣವುಳ್ಳವಳಾಗಿದ್ದರೆ, ಅವಳ ಒಡವೆ ಸೀರೆಯ ಕಾರಣವಾಗಿಯೇ ಅವಳನ್ನು ಗೌರವಿಸಲು ಸಾಧ್ಯವೇ? ಆದ್ದರಿಂದ ಶ್ರೀಮಂತ ಮಹಿಳೆಯರೂ ಸಮಾರಂಭಗಳಿಗೆ ಹಿತಮಿತವಾದ ವೇಷಭೂಷಿತರಾಗಿ ಬಂದರೆ ಈ ಒಡವೆಗಳಿಂದಲೇ ಮರ್ಯಾದೆ ಎನ್ನುವ ಭ್ರಮೆ ನಮ್ಮ ಮಹಿಳೆಯರಲ್ಲಿ ಮಾಯವಾಗುತ್ತದೆ.

**ಉತ್ತರ 4 :** ಒಡವೆಗಳು ಬದುಕಿಗೆ ಆಪದ್ಧನವಿದ್ದಂತೆ, ಕಷ್ಟ ಬಂದಾಗ ಮಾರಬಹುದು.

**ವಿಶ್ಲೇಷಣೆ :** ಈ ವಾದ ಸ್ವಲ್ಪಮಟ್ಟಿಗೆ ನಿಜವಾದರೂ ಪೂರ್ತಿ ನಿಜವಲ್ಲ. ಪ್ರತಿ ಮಹಿಳೆಗೂ ತನ್ನ ಒಡವೆಗಳ ಜೊತೆ ಭಾವನಾತ್ಮಕ ಸಂಬಂಧ ಬೆಳೆದುಬಂದು ಬಿಟ್ಟಿರುತ್ತದ. ಅದರಲ್ಲೂ ತೌರಿನಿಂದ ಉಡುಗೊರೆಯಾಗಿ ಬಂದವಾದ್ದರಂತೂ ಅದರ ಮೇಲೆ ಮೋಹ ವಿಪರೀತ. ಇದೇ ವಿಷಯದಲ್ಲಿ ಗಂಡ - ಹೆಂಡತಿಯರಲ್ಲಿ ವಿರಸ ಬೆಳೆದು ವಿಚ್ಛೇದನದವರೆಗೆ ಕಾಡುತ್ತದೆ. ನಾವು ಕೊಂಡಾಗ ಒಂದು ಒಡವೆಗೆ ಎಷ್ಟು ಕೊಟ್ಟಿರುತ್ತೇವೆಯೋ ಅದನ್ನೇ ಮರು ವಾರವೇ ಮಾರಲು ಹೋದರೆ ಅರ್ಧದಷ್ಟೂ ಹಣ ವಾಪಸ್ ಬರುವುದಿಲ್ಲ. ಹೀಗಾಗಿ ಈ ವ್ಯವಹಾರದಲ್ಲಿ ನಷ್ಟವೇ ಹೆಚ್ಚು. ಆಪದ್ಧನ ಎಂದು ಸಮಾಧಾನ ಮಾಡಿಕೊಳ್ಳುವುದು ಬರಿ ಭ್ರಮೆಯ ನೆವಗಳಷ್ಟೇ. ಗಿರವಿ ಇಡುವುದು, ಬಿಡಿಸಿಕೊಳ್ಳಲಾರದೇ ಕಳೆದೇಕೊಳ್ಳುವುದು ಇವು ಕೆಳವರ್ಗದ ಮಹಿಳೆಯರಲ್ಲಿ ನಡೆಯುತ್ತಲೇ ಇರುವ ಚಟುವಟಿಕೆ.

ಎಲ್ಲರೂ ಬಿಚ್ಚೋಲೆ ಗೌರಮ್ಮಗಳಾಗುವುದು ಸಾಧ್ಯವೂ ಇಲ್ಲ, ಅಗತ್ಯವೂ ಇಲ್ಲ. ಆದರೆ ಹಿತಮಿತವಾಗಿ ಆಭರಣ ಧರಿಸುವುದರಿಂದ ಎಷ್ಟೋ ಸಮಸ್ಯೆಗಳು ನಿವಾರಣೆಯಾಗುತ್ತವೆ. ರಸ್ತೆಯಲ್ಲಿ ಸರ ಎಳೆದು ಅಪಹರಿಸುವವರ ಸಂಖ್ಯೆ ಕಡಿಮೆಯಾಗುತ್ತದೆ. ತುಂಬ ಆಭರಣಗಳಿರುವ ಮಹಿಳೆಯರ ಕಷ್ಟ ಎರಡೂ ಕಡೆ ಹರಿತವಾದ ಕತ್ತಿಯೊಂದಿಗೆ ಆಡಿದಂತೆ. ಆಭರಣಗಳನ್ನು ಮನೆಯಲ್ಲಿಟ್ಟರೂ ಭಯ, ತೊಟ್ಟು ಓಡಾಡುವುದಕ್ಕೂ ಭಯ ! ಇದಕ್ಕೆ ಉಪಾಯವೆಂದರೆ ಬ್ಯಾಂಕ್‌ಗಳಲ್ಲಿ ಲಾಕರ್‌ಗಳನ್ನು ಬಾಡಿಗೆ ಪಡೆದು ಅದರಲ್ಲಿಡುವುದು. ಮತ್ತೆ ದೇಶದ ಲೆಕ್ಕಕ್ಕೆ 'ಡೆಡ್ ಕ್ಯಾಪಿಟಲ್ !!'

ಆದ್ದರಿಂದ ಈ ಬಗ್ಗೆ ನಮ್ಮ ಮಹಿಳೆಯರು ಮರು ಚಿಂತಿಸಬೇಕಾದ ಅಗತ್ಯ ಹಿಂದೆಂಗಿಂತಾ ಇಂದು ಹೆಚ್ಚಾಗಿದೆ.

**ಕೊಳ್ಳುಬಾಕ ಸಂಸ್ಕೃತಿ ಮತ್ತು ಗೃಹಿಣಿ (ಕಂಡದ್ದನ್ನೆಲ್ಲಾ ಕೊಳ್ಳಬೇಕೇ?)**

ಕಳೆದ ವರ್ಷ ನಾನೊಂದು ಪ್ರಾಜೆಕ್ಟ್ ಅನ್ನು ನಮ್ಮ 'ನೆರವು' ಸಂಸ್ಥೆಯ ವತಿಯಿಂದ ನಡೆಸಿಕೊಡಬೇಕಾಯಿತು. ಹೆಚ್ಚು ವಿದ್ಯಾವಂತೆಯರಲ್ಲದ ಕೆಳ ಮಧ್ಯಮ ವರ್ಗದ ಮಹಿಳೆಯರಿಗೆ ಸಮೂಹ ಗಾಯನ, ಕೋಲಾಟ ಇತ್ಯಾದಿಗಳಲ್ಲಿ ತರಪೇತಿ ಕೊಡುವುದು ಆ ಪ್ರಾಜೆಕ್ಟ್‌ನ ಮುಖ್ಯ ಉದ್ದೇಶ ಮತ್ತು ಅವರನ್ನೆಲ್ಲಾ ಸಂಘಟಿಸಿ ಮಹಿಳಾ ಕಾರ್ಯಕ್ರಮ ನಡೆಸುವುದೂ, ಅವರಿಗೆ ಪ್ರಾಜ್ಞರಿಂದ ಭಾಷಣ ಮಾಡಿಸಿ ಅರಿವು ಹೆಚ್ಚಿಸುವುದೂ ಇವುಗಳ ಭಾಗವೇ ಆಗಿತ್ತು. ಅಲ್ಲಿ ಸುಮಾರು ಮೂವತ್ತು, ನಲವತ್ತು ಮಹಿಳೆಯರು ಸೇರಿದ್ದರು. ಅಲ್ಲಿಗೆ ಹೋಗುವ ಮೊದಲು ನಾಟಕವಾಗಲೀ, ಸಮೂಹ ನೃತ್ಯಗಳಾಗಲೀ ಮಾಡಿಸಿದರೆ ಅದಕ್ಕೆ ಬೇಕಾದ ಕಾಸ್ಟ್ಯೂಮ್ಸ್ ಇತ್ಯಾದಿಗಳನ್ನು ಒದಗಿಸುವುದು ನಮಗೂ ಮತ್ತು ಆ ಮಹಿಳೆಯರಿಗೂ ದುಬಾರಿಯಾಗುತ್ತದೆ ಎನ್ನುವ ಕಾರಣಕ್ಕೆ ಬರೀ ಕೋಲಾಟ ಮತ್ತು ಸಮೂಹ ಗಾಯನ ಕಲಿಸುವ ಸಿದ್ಧತೆ ಮಾಡಿಕೊಂಡೆ. ನನ್ನ ಮನದಲ್ಲಿ ಆಷ್ಟೇನೂ ಉತ್ತಮ ವೇಷಭೂಷಣಗಳಿಲ್ಲದ ಸೀದಾ ಸಾದಾ ಉಡುಪಿನ ಮಹಿಳೆಯರ ಕಲ್ಪನೆ ಇತ್ತು. ಅಲ್ಲಿ ಹೋಗಿ ನೋಡುತ್ತೇನೆ?! ದೃಶ್ಯವೇ

ಭಿನ್ನವಾಗಿದೆ. ಅಲ್ಲಿ ಸೇರಿದ್ದ ಸುಮಾರು 18-30 ವಯಸ್ಸಿನ ಆ ಮಹಿಳೆಯರು ಮದುವೆ ಮನೆಗೆ ಬಂದಂತೆ ಸಿಂಗರಿಸಿಕೊಂಡು ಬಂದಿದ್ದಾರೆ! ಪ್ರತಿಯೊಬ್ಬರ ಕಿವಿಗಳಲ್ಲೂ ಎರಡು, ಮೂರು, ನಾಲ್ಕು ತೂತುಗಳಲ್ಲಿ ಆಭರಣಗಳು ಹೊಳೆಯುತ್ತಿವೆ ! ಬೆರಗಿನ ವಿಷಯವೆಂದರೆ ಅವರೆಲ್ಲ ಸಣ್ಣಪುಟ್ಟ ಕಾರ್ಖಾನೆಗಳಲ್ಲಿ, ಏಜೆನ್ಸಿಗಳಲ್ಲಿ ದಿನಕೂಲಿಯ ಮೇಲೆ ದುಡಿಯುತ್ತಿರುವ ಮಹಿಳೆಯರು. ಗಂಡಂದಿರಿಂದ ಯಾವ ಸಹಾಯವೂ ಇಲ್ಲದವರು ! ಅಲ್ಲಿನ ಅನೇಕ ಮಹಿಳೆಯರ ಗಂಡಂದಿರು ಮತ್ತೊಂದು ಮದುವೆ ಮಾಡಿಕೊಂಡು ಇವರಿಗೆ ನೋವನ್ನೇ ಕೊಟ್ಟಿದ್ದಾರೆ. ಈ ಪಾಪದ ಮಹಿಳೆಯರೋ ಏಕಾಂಗಿಯಾಗಿ ಒಂದೋ, ಎರಡೋ ಮಕ್ಕಳನ್ನು ಸಾಕುತ್ತ ಇತ್ತ ತೌರಿನ ಸಹಾಯವೂ ಇಲ್ಲದೆ ಅತ್ತ ಗಂಡನ ಒತ್ತಾಸೆಯೂ ಇಲ್ಲದೆ, ನೆಟ್ಟಗೆ ಗಟ್ಟಿಯಾದ ಕೆಲಸವೂ ಇಲ್ಲದೆ ಬದುಕು ಸಾಗಿಸುತ್ತಿರುವವರು. ಕಾರ್ಪೊರೇಷನ್ ನಡೆಸುತ್ತಿರುವ ಹೊಲಿಗೆ ತರಗತಿಗಳಿಗೆ ಸೇರಿ ಹೊಲಿಗೆ ಕಲಿತು, ಕಾರ್ಪೊರೇಷನ್ ಕೊಡುವ ಉಚಿತ ಹೊಲಿಗೆಯಂತ್ರ ಪಡೆದು ನಾಲ್ಕು ಕಾಸು ಸಂಪಾದಿಸುವ ಕನಸು ಹೊತ್ತವರು.

ಬಡವರು ಚೆಂದ ಕಾಣಲು ಶೃಂಗಾರ ಮಾಡಿಕೊಳ್ಳ ಬಾರದೆಂದಲ್ಲ. ಆದರೆ ಸಿನೆಮಾ ತಾರೆಯರನ್ನು , ಟೀವಿ ತಾರೆಯರನ್ನು ಅನುಕರಿಸಲು ಹೋಗಿ, ಸರಳ ಬದುಕನ್ನೇ ಬಿಟ್ಟು ಬಿಡುತ್ತಿರುವುದು ಅತ್ಯಂತ ದುರಂತದ ಸಂಗತಿ. ಬಂಗಾರದ ಬೆಲೆ ಏರಿರುವ ಈ ದಿನಗಳಲ್ಲಿ ಕಿವಿಗೆ ಒಂದು ತೂತಿಗೆ ಒಂದು ಓಲೆ ಹಾಕಿಕೊಳ್ಳುವುದೇ ಪ್ರಯಾಸವಾಗಿರುವಾಗ ಎರಡು, ಮೂರು ತೂತುಗಳಿಗೆ ಆಭರಣಗಳೇಕೆ? ಪ್ರತಿಯೊಬ್ಬರೂ ಕಾಲಿಗೆ ಬೆಳ್ಳಿ ಗೆಜ್ಜೆ ಧರಿಸಲೇಬೇಕೆಂಬ ನಿಯಮವಾದರೂ ಎಲ್ಲಿದೆ? ಹಿಂದೆಲ್ಲಾ ಶುಭ್ರವಾಗಿ ಮುಖತೊಳೆದು ಒಗೆದ ಬಟ್ಟೆಯಲ್ಲಿ ಒರೆಸಿಕೊಂಡು ಹಣೆಗೊಂದು ಕುಂಕುಮದ ಬೊಟ್ಟು ಇಟ್ಟರೆ ಶೃಂಗಾರವೆನ್ನುವ ಕೆಲಸ ಮುಗಿದೇ ಹೋಗುತ್ತಿತ್ತು. ಇಂದು ನಮ್ಮ ಮನೆಯ ಕೆಲಸದವಳು ತನ್ನ ಶಾಲೆಗೆ ಹೋಗುವ ಮಗಳಿಗೆ ಫೇರ್ ಅಂಡ್ ಲೌಲೀ ಕ್ರೀಂ ಬೇಕೆಂದು ತನಗೆ ಅಂಗಡಿಗೆ ಹೋಗಿ ಆ ಹೆಸರು ಹೇಳಲು ಬರುವುದಿಲ್ಲವೆಂದೂ ತನ್ನ ಮಗಳು ಚಿಕ್ಕವಳಾದ ಕಾರಣ ಅವಳ ಕೈಗೆ ಹಣ ಕೊಡಲು ಭಯವಾದ್ದರಿಂದ ನಾನು ಅಂಗಡಿಗೆ ಹೋದಾಗ ತಂದುಕೊಡಬೇಕೆಂದು ಕೇಳಿಕೊಳ್ಳುತ್ತಾಳೆ. 'ಶಾಲೆಗೆ ಹೋಗುವ ಮಕ್ಕಳಿಗೆ ಅದೆಲ್ಲಯಾಕೆ? ಎಂದರೆ 'ಅವಳೂ ಹುಡುಗಿಯಲ್ಲವಾ? ಅವಳಿಗೂ ಬೆಳ್ಳಗಾಗಬೇಕೆಂದು ಆಸೆಯಿಲ್ಲವಾ?' ಎಂದು ಕೇಳುತ್ತಾಳೆ.

ಇದು ಜಾಹೀರಾತು ಯುಗ. ಈ ಜಾಹೀರಾತು ಹೇಳುವ ಸುಳ್ಳುಗಳಿಗೆ ಈ ಅಲ್ಪ ವಿದ್ಯಾವಂತರೂ, ಅವಿದ್ಯಾವಂತರೂ ಬಲಿಯಾಗುತ್ತಿದ್ದಾರೆ. ಬೇಕಾಗಲೀ ಬೇಡವಾಗಲೀ ಸಾಮಾನು ಖರೀದಿಸುವುದೇ ಚಟವಾಗಿ ಹೋಗುತ್ತಿದೆ. ಒಂದೆಡೆ ಗಂಡಸರು ಪ್ಲೇವಿನ್ ಲಾಟರಿ, ಒಂದಂಕಿ ಲಾಟರಿ ಇತ್ಯಾದಿ ಭ್ರಮೆಗಳಿಗೆ ಬಲಿಯಾಗಿ ಕಷ್ಟಪಟ್ಟು ದುಡಿದ ಹಣವನ್ನು ಪೋಲು ಮಾಡುತ್ತಿದ್ದರೆ, ಇನ್ನೊಂದೆಡೆ ಹೆಂಗಸರು ನಕಲಿ ಒಡವೆ, ವಸ್ತ್ರಗಳು, ತುಟಿ, ಉಗುರುಗಳಿಗೆ ಹಚ್ಚುವ ಬಣ್ಣಗಳು, ಮುಖಕ್ಕೆ ಹಚ್ಚುವ ಕ್ರೀಂಗಳು, ಶಾಂಪೂಗಳು ಎಂದು ಹಣ ಹಾಳುಮಾಡುತ್ತಿದ್ದಾರೆ. ಈ ಸೌಂದರ್ಯ ಸಾಧನಗಳಂತೂ ಒಂದಕ್ಕಿಂತ ಒಂದು ದುಬಾರಿ. ಕಡಿಮೆ ಬೆಲೆಯದನ್ನು ಖರೀದಿಸಿದಿರೋ ಅವುಗಳಲ್ಲಿ ಬಳಸಿರುವ ಕೆಮಿಕಲ್‌ಗಳಿಂದ ಚರ್ಮ ಸುಡುವ, ಕೂದಲು ಉದುರುವ ಸಾಧ್ಯತೆಯೇ ಹೆಚ್ಚು. ಮನೆಗೆಲಸ ಮಾಡುವ ತರುಣಿಯೊಬ್ಬಳು ಯಾವುದೋ ಹೆಸರಿಲ್ಲದ ಕಂಪನಿಯ ಸ್ನೋ ಬಳಸಿ ಮುಖದ ಚರ್ಮ ಬತ್ತಿಹೋಗಿ ಒಣಗಿ ಉದುರಿ ಉರಿ ತಡೆಯದೇ ಆಸ್ಪತ್ರೆ ಸೇರಿದ ಸುದ್ದಿ (ಮುಂಬೈನಲ್ಲಿ) ಪತ್ರಿಕೆಯಲ್ಲಿ ಬಂದಿತ್ತು. ಮುಖದಲ್ಲಿ ಇದ್ದ ಬಣ್ಣವೂ ಹೋಗಿ ಮತ್ತು ಕರಕಲಾದ ಪ್ರಸಂಗಗಳು ಬೇಕಾದಷ್ಟಿವೆ. ಆದರೂ ಮಹಿಳೆಯರಿಗೆ ಈ ಕ್ರೀಂಗಳ ಮೋಹ ಹೋಗಿಲ್ಲ. ಈಗಂತೂ ನಮ್ಮ ದೇಶದ್ದೇ ಅಲ್ಲದೆ ಪರದೇಶದ ವಸ್ತುಗಳೂ ಹೇರಳವಾಗಿ ಸಿಗುತ್ತವೆ. ನಾವೊಮ್ಮೆ ಪ್ರವಾಸ ಹೋದಾಗ ಒಂದು ಸಣ್ಣ ಹಳ್ಳಿಯ ಪೆಟ್ಟಿಗೆ ಅಂಗಡಿಯಲ್ಲಿ ಅಮೇರಿಕಾದ ಸೌಂದರ್ಯ ಸಾಧನಗಳೂ, ಜಪಾನ್ ಚೀನಾದ ಆಟಿಕೆಗಳೂ ಮಾರಾಟವಾಗುತ್ತಿದ್ದುದನ್ನು ಕಂಡೆ !

ಅಡುಗೆ ಮಾಡಲು ಎಷ್ಟು ಪಾತ್ರೆಗಳು ಬೇಕು? ಮೊದಲು ಹಿತ್ತಾಳೆ, ತಾಮ್ರ, ಅಲ್ಯೂಮಿನಿಯಂ ಪಾತ್ರೆಗಳಿದ್ದವು. ನಂತರ ಪ್ರೆಶರ್ ಕುಕ್ಕರ್‌ನ ಆವಿಷ್ಕಾರವಾಯಿತು. ಆಮೇಲೆ ಸ್ಟೀಲ್ ಪಾತ್ರೆಯ ಆಗಮನ. ಆನಂತರ ನಾನ್‌ಸ್ಟಿಕ್ ಪಾತ್ರೆಗಳ ಸಡಗರ. ತಾಮ್ರದ ತಳದ ಪಾತ್ರೆಗಳು ! ಒಂದೇ ಎರಡೇ? ಇಂದು ಮಾರುಕಟ್ಟೆಯಲ್ಲಿ ಗಲಿಬಿಲಿಯಾಗುವಷ್ಟು ವಿವಿಧ ನಮೂನೆಯ ಪಾತ್ರೆಗಳು ! ಮೊದಲಿದ್ದ ಹಿತ್ತಾಳೆ, ತಾಮ್ರ, ಅಲ್ಯೂಮಿನಿಯಂ ಪಾತ್ರೆಗಳು ನಮಗೆ ಬೇಡವೆನಿಸಿದರೆ, ಹಳೆಯದಾದರೆ ವಾಪಸ್ ಮಾರಬಹುದಿತ್ತು. ಹೊಸದನ್ನು ಕೊಳ್ಳಬಹುದಿತ್ತು. ಆದರೆ ಈ ಸ್ಟೀಲ್ ಮತ್ತು ಮಿಕ್ಕವು? ಬೇಡವೆನಿಸಿದರೆ ತಿಪ್ಪೆಗೆ ಎಸೆಯಬೇಕು ಅಷ್ಟೆ. ನಿಜ, ಹಿತ್ತಾಳೆ ಮುಂತಾದವುಗಳಿಂದ ಕಿಲುಬು ಉಂಟಾಗಿ ಆರೋಗ್ಯಕ್ಕೆ ಧಕ್ಕೆ ಉಂಟಾಗುತ್ತಿದ್ದುದನ್ನು ಸ್ಟೀಲ್ ಪಾತ್ರೆಗಳು ನಿವಾರಿಸಿದವು ಎನ್ನವುದನ್ನು ಒಪ್ಪಿಕೊಂಡರೂ ನಂತರ ಬಂದ ನಾನ್‌ಸ್ಟಿಕ್ ವೇರ್‌ಗಳು ಕೇವಲ ಮನೆಯೊಡತಿಯ ದರ್ಜೆ,

ಶೋಭೆ (ಹಾಗೆಂದು ಭಾವಿಸುವುದಾದರೆ !) ಹೆಚ್ಚಿಸಿದುವೇನೋ? ಇವತ್ತು ಎಲ್ಲ ಮಧ್ಯಮ ವರ್ಗದ ಮನೆಯಲ್ಲೂ ಅಟ್ಟದಲ್ಲಿ ಹೊರೆ ಹೊರೆ ಪಾತ್ರೆಗಳು. ಹೊಸತನ್ನು ಕೊಳ್ಳುವುದು ಹಳೆಯದನ್ನು ಎಸೆಯಲಾರದ ಸಂಕಟಕ್ಕೆ ಅಟ್ಟದಲ್ಲಿಡುವುದು. ಗಾಂಧೀಜಿಯವರು ಭಾರತದಂತಹ ಬಡ ದೇಶದಲ್ಲಿ ಯಾವುದೇ ವಸ್ತುವನ್ನು ಬಳಸಿದರೂ ಅದನ್ನು ಮರುಬಳಕೆಗೆ ಅಂದರೆ ರೀಸೈಕಲ್ ಮಾಡಲು ಒಗ್ಗುವಂತಿರಬೇಕು ಎಂದು ಪದೇ ಪದೇ ಹೇಳುತ್ತಿದ್ದರು. ಈ ಮಾತು ಪಾತ್ರೆ, ಬಟ್ಟೆ ಮುಂತಾದವುಗಳಿಗೂ ಅನ್ವಯಿಸುತ್ತದೆ. ಪ್ರತಿ ಮನೆಯಲ್ಲಿ ಅಟ್ಟದಲ್ಲಿ ಧೂಳು ತಿನ್ನುತ್ತಾ ಮೂಟೆ ಮೂಟೆ ಪಾತ್ರೆಗಳು ಬಿದ್ದಿದ್ದರೆ ಅಷ್ಟು ಹಣ ಧೂಳು ತಿನ್ನುತ್ತಾ ಬಿದ್ದಂತಾಯಿತು. ಆಗ ದೇಶದ ಆರ್ಥಿಕ ಸ್ಥಿತಿ ಏರುಪೇರಾದಂತಾಯಿತು. ತೆರಿಗೆ ಕೊಡದೆ ಸರ್ಕಾರಕ್ಕೆ ಲೆಕ್ಕ ಸಿಗದಂತೆ ಹಣಗಳಿಸಿ ಕಪ್ಪು ಹಣವನ್ನು ಬಚ್ಚಿಟ್ಟುಕೊಳ್ಳುವುದು ಎಷ್ಟು ದ್ರೋಹವೋ ಹಾಗೇ ಅನಗತ್ಯ ಸಾಮಾನುಗಳನ್ನು ಸೇರಿಸಿ ಉಪಯೋಗಿಸದೇ ಕೂಡಿಡುವುದೂ ಅಂತಹುದೇ ಅಪರಾಧವಾಗುತ್ತದೆ. ಈ ಬಗ್ಗೆ ಹೆಚ್ಚಿನ ಆರ್ಥಿಕ ತಜ್ಞರಿಂದ ಚಿಂತನೆ ನಡೆಯಬೇಕಾಗಿದೆ. ಹನಿಹನಿಗೂಡಿದರೆ ಹಳ್ಳವೆನ್ನುವ ಮಾತು ನಿಜ ತಾನೆ? ತಪ್ಪುಗಳೂ ಹಾಗೇ ಹನಿ ಹನಿ ಸೇರಿ ಕೊಳ್ಳವಾಗುತ್ತದೆ.

ಇನ್ನು ಬಟ್ಟೆಗಳ ಬಗ್ಗೆ ಮಾಡುತ್ತಿರುವ ದುಂದುವೆಚ್ಚವಂತೂ ಯಾವ ಲೆಕ್ಕಕ್ಕೂ ಸಿಗುವಂತಿಲ್ಲ. ಮೊದಲಾದರೆ ಬರೀ ಹತ್ತಿ ಬಟ್ಟೆಗಳಿರುತ್ತಿತ್ತು. ಹಳೆಯ ಬಟ್ಟೆಗಳನ್ನು ಕಾಗದ ತಯಾರಿಕೆಗೋ ಮತ್ತೊಂದಕ್ಕೋ ಬಳಸಲಾಗುತ್ತಿತ್ತು. ಈಗ ಬರುವ ಈ ಸಿಂಥೆಟಿಕ್ ಬಟ್ಟೆಗಳೋ ಯಾತಕ್ಕೂ ಉಪಯೋಗವಿಲ್ಲ. ಕೆಳಮಧ್ಯಮ ವರ್ಗವಿರಲಿ, ಮಧ್ಯಮ ಅಥವಾ ಮೇಲ್ ಮಧ್ಯಮ ವರ್ಗವಿರಲಿ ಮಕ್ಕಳಿಗೆ ರೆಡಿಮೇಡ್ ಉಡುಪುಗಳು ಬೇಕೇಬೇಕು. ಅದೂ ಒಂದೆರಡಲ್ಲ, ಒಂದೊಂದು ಮಗುವಿಗೂ ಒಂದೊಂದು ಬೀರುವಿನ ಭರ್ತಿ! ಈ ವರ್ಷ ತಂದದ್ದು ಮುಂದಿನ ವರ್ಷಕ್ಕೆ ಬಿಗಿಯಾಗುತ್ತದೆ. ಅದನ್ನು ಉಪಯೋಗಿಸುವಂತಿಲ್ಲ. ಎಸೆಯಲು ಸಂಕಟ ! ಅದರ ಅಂದ ಚೆಂದಗಳು, ಅದಕ್ಕೆ ಕೊಟ್ಟಿರುವ ಹಣ ಇವುಗಳ ಪಾಶ ಎಷ್ಟು ಬಲವಾಗಿರುತ್ತದೆಂದರೆ ಬೇರೆಯವರಿಗೆ ಕೊಡುವುದಕ್ಕೂ ಮನಸ್ಸು ಬರುವುದಿಲ್ಲ. ಪರಿಣಾಮ ಪ್ರತಿ ಮನೆಯ ಬೀರು, ಪೆಟ್ಟಿಗೆ, ಸೂಟ್‌ಕೇಸ್‌ಗಳಲ್ಲಿ ಹಳೆಯ ಬಟ್ಟೆ ಜಮಾವಣೆ ! ಮನೆಮನೆಯಲ್ಲಿ ಹೀಗೆ ವರ್ಷಕ್ಕೆ ಕಡಿಮೆ ಎಂದರೆ ಒಂದು ಸಾವಿರ ರೂಪಾಯಿ ದಂಡವಾಗುತ್ತಿದೆ ಎಂದು ಭಾವಿಸೋಣ. ದೇಶದ ಕೋಟಿ ಕೋಟಿ ಮನೆಯ ಸಾವಿರ ಕೋಟಿ ರೂಪಾಯಿ ದಂಡವಾದರೆ ದೇಶ ಪ್ರಗತಿಯನ್ನು ಸಾಧಿಸುವುದಾದರೂ ಹೇಗೆ? ಇದೇ ಕಾರಣದಿಂದ ಈ ವಸ್ತುವನ್ನು ಉತ್ಪಾದಿಸುವ ಶ್ರೀಮಂತರು ದಿನದಿನಕ್ಕೆ ಶ್ರೀಮಂತರಾಗುತ್ತಿದ್ದಾರೆ. ಬಡವರು ಇನ್ನೂ ಹೆಚ್ಚು ಬಡತನದ ರೇಖೆಯ ಕೆಳಗೆ ತಳ್ಳಲ್ಪಡುತ್ತಿದ್ದಾರೆ.

ತನ್ನ ಹೊಟ್ಟೆ ಎಷ್ಟು ಹಿಡಿಸುತ್ತದೋ ಅಷ್ಟನ್ನು ತಿನ್ನದೇ ಸದಾ ತಿನ್ನುತ್ತಲೇ ಇರುವವನನ್ನು ಹೊಟ್ಟೆಬಾಕ, ತಿನ್ನುಬಾಕ ಎಂದೆಲ್ಲಾ ಹೀಯಾಳಿಸುತ್ತೇವೆ. ಹೆಚ್ಚು ತಿಂದರೆ ದೇಹದ ಸಮತೋಲನ ಕೆಡುತ್ತದೆ ಎಂದು ಎಚ್ಚರಿಸುತ್ತೇವೆ. ಹಾಗೆಯೇ ತನ್ನ ಮನೆಗೆ ಎಷ್ಟು ಅಗತ್ಯವೋ, ತನ್ನ ಬದುಕಿಗೆ ಮೂಲಭೂತ ಸೌಕರ್ಯಗಳಿಗೆ ತಕ್ಕಂತೆ ಎಷ್ಟು ಬೇಕೋ ಅಷ್ಟನ್ನು ಖರೀದಿಸದೆ, ಸಾಲ ಮಾಡಿಯಾದರೂ ಅಗತ್ಯ ಇರಲಿ ಇಲ್ಲದಿರಲಿ, ಕೊಳ್ಳುವವರನ್ನು ಕೊಳ್ಳುಬಾಕರು ಎನ್ನಬಹುದು. ಇವತ್ತಿನ ಸಂಸ್ಕೃತಿಯೇ ಕೊಳ್ಳುಬಾಕ ಸಂಸ್ಕೃತಿ ಆಗಿದೆ. ಹಿಂದೆಲ್ಲಾ ದುಬಾರಿಯ ವಸ್ತುವನ್ನು ಕೊಳ್ಳುವಾಗ ಒಂದಲ್ಲ ಹತ್ತು ಬಾರಿ ಚಿಂತಿಸುವ ಪರಿಪಾಠವಿತ್ತು. ಇಂದು ಹಾಗಲ್ಲ, ಕೊಳ್ಳುವುದಕ್ಕೆ ನಾವು ಕೊಟ್ಟುಕೊಳ್ಳುವ ಕಾರಣಗಳೂ ಬರೀ ಕ್ಷುಲ್ಲಕವಾಗಿರುತ್ತವೆ. ಪಕ್ಕದ ಮನೆಯಲ್ಲಿ ವಿಶಾಲ ತೆರೆಯ ಟೀವಿ ಇದೆ, ನಮಗೂ ಬೇಕು; ಅಕ್ಕನೋ, ತಂಗಿಯೋ, ಓರಗಿತ್ತಿಯೋ ಒಡವೆ ಮಾಡಿಸಿಕೊಂಡಳು ನನಗೂ ಬೇಕು; ಅವರು ಮಗಳ ಮದುವೆಯಲ್ಲಿ ವಧುವಿಗೆ ಹತ್ತು ಸಾವಿರದ ಸೀರೆ ತಂದರು ನಾವೇನು ಕಡಿಮೆ ಹದಿನೈದು ಸಾವಿರಕ್ಕೆ ತರೋಣ. ಅವರು ವರನಿಗೆ ಒಂದು ಸೂಟು ಕೊಟ್ಟರೇ ? ನಾವು ಎರಡು ಕೊಡೋಣ. ಹೀಗೆ ಕಾರಣಗಳ ಪಟ್ಟಿ ಬೆಳೆಯುತ್ತಾ ಹೋಗುತ್ತದೆ. ಬ್ರಿಟಿಷರು ತಮ್ಮ ಚಳಿದೇಶದಲ್ಲಿ ಮೈ ಮುಚ್ಚಲು ಪ್ಯಾಂಟು ಕೋಟುಗಳನ್ನು ಬಳಸಲೇಬೇಕಾಗಿತ್ತು. ಅದು ನಂತರ ವಿದ್ಯಾವಂತರ ಪ್ರತಿಷ್ಠೆಯ ದಿರಿಸಾಯಿತು. ನಮ್ಮ ದೇಶದಲ್ಲೂ ಈ ಪ್ರತಿಷ್ಠೆಯ ಕಾಯಿಲೆ ವಕ್ಕರಿಸಿ ಹಬ್ಬಿತು. ತಮಾಷೆಯೆಂದರೆ ಇಂದು ಮದುವೆ ಎಂದರೆ ವರನಿಗೆ ಸೂಟು ಅನ್ನುವುದು ಅನಿವಾರ್ಯವೇಕಾಗಿದೆಯೋ ಗೊತ್ತಿಲ್ಲ. ವರಮಹಾಶಯ ರೈತನಾಗಿರಲಿ, ವ್ಯಾಪಾರಿಯಾಗಿರಲಿ, ಗುಮಾಸ್ತನಾಗಿರಲಿ, ಬಡವನಾಗಿರಲಿ ಬಲ್ಲಿದನಾಗಿರಲಿ ಹೆಂಡತಿಯ ಜೊತೆ ಸೂಟೊಂದು ಬರಲೇಬೇಕು. ಮದುವೆಯ ಆರತಕ್ಷತೆಯಲ್ಲಿ ಧರಿಸಿದ ಆ ಸೂಟು ಆ ಮಹಾಶಯನ ಮೈಮೇಲೆ ಮತ್ತೆಂದೂ ಬರುವುದೇ ಇಲ್ಲ. ಕೆಳಗಿನ ಪ್ಯಾಂಟು. ಹಾಗೆ ಹೀಗೆ ಬಳಕೆಗೆ ಬರಬಹುದು. ಕೋಟಂತೂ ಇಟ್ಟಲ್ಲೇ ಹಳತಾಗುತ್ತದೆ. ಚಿಕ್ಕದಾಗುತ್ತದೆ, ಜಿರಲೆಗೆ ಆಹಾರವಾಗುತ್ತದೆ !

ಗಾಂಧೀಜೀಯವರು ರೌಂಡ್ ಟೇಬಲ್ ಕಾನ್‌ಫರೆನ್ಸ್‌ಗೂ ಮಂಡಿಯ ಮೇಲೆ ಕಚ್ಚೆಪಂಚೆ ಧರಿಸಿ ಹೋದ ಕಥೆ ನಮ್ಮೆಲ್ಲರಿಗೂ ಗೊತ್ತಿದೆ. ಆ ಮಹಾತ್ಮ 'ನನ್ನ ದೇಶದ ಬಡಜನರಿಗೆ ಮಾನ

ಮುಚ್ಚಿಕೊಳ್ಳಲೂ ಬಟ್ಟೆಯಿಲ್ಲ' ಎಂದು ಇಡೀ ವಿಶ್ವಕ್ಕೆ ಚೀರಿ ಚೀರಿ ಹೇಳಿದರು. ಅವರೆಂದಂತೆ ತುಂಡು ಬಟ್ಟೆಯೂ ಗತಿಯಿಲ್ಲದ ಜನ ಇಂದಿಗೂ ಇದ್ದಾರೆ. ಆದರೆ ಮಧ್ಯಮ ವರ್ಗದ ಜನರ ಬೀರು, ಪೆಟ್ಟಿಗೆಗಳಲ್ಲಿ ಕುಳಿತ ಬಟ್ಟೆಗಳಿಗೆ ಈ ಜನ ಕಾಣುತ್ತಿಲ್ಲ ಅಷ್ಟೆ. ಪುರಂದರದಾಸರು 'ಎಲ್ಲಾರು ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ' ಎಂದು ವಿಶಾಲಾರ್ಥದಲ್ಲಿ ತತ್ವಪದ ಹಾಡಿದರು. ಆದರೆ ಇಂದಿನ ಜನ ನ್ಯಾಯವಾಗಲ್ಲದೆ ಅನ್ಯಾಯವಾಗಿಯೂ ದುಡಿದು ಗಳಿಸುವುದು ' ದುರಾಸೆಗಾಗಿ, ಥಾನು ಥಾನು ಬಟ್ಟೆಗಾಗಿ.'

ಸರಳ ಬದುಕನ್ನು ನಮ್ಮ ಪೂರ್ವಜರು ಯಶಸ್ವಿಯಾಗಿ ಬದುಕಿ ಸಾಧಿಸಿ ತೋರಿಸಿ ಹೋಗಿದ್ದಾರೆ. ಆದರೆ ವಿಜ್ಞಾನದ ಹೊಸ ಹೊಸ ಆವಿಷ್ಕಾರಗಳು ಜಗತ್ತಿಗೆ ಪದಾರ್ಪಣ ಮಾಡುತ್ತಿದ್ದ ಹಾಗೆ ಮನುಷ್ಯನ ಆಸೆಗಳೂ ಮಿತಿ ಇಲ್ಲದ ಸಾಗರದಂತೆ ಭೋರ್ಗರೆಯುತ್ತಿವೆ. ಅದೇ ದಾಸರು ಹಾಡಿದಂತೆ 'ಇಷ್ಟು ದೊರಕಿದರೆ ಅಷ್ಟು ಬೇಕೆಂಬಾಸೆ, ಅಷ್ಟು ದೊರಕಿದರೆ ಮತ್ತಷ್ಟರಾಸೆ, ಕಷ್ಟಬೇಡೆಂಬಾಸೆ, ಕಡುಸುಖವ ಕಾಂಬಾಸೆ, ಭೋಗ ಜೀವನದಾಸೆ, ಇದೇ ಕೊಳ್ಳುಬಾಕ ಸಂಸ್ಕೃತಿಯ ಮೂಲ ಮಂತ್ರ. ಗೃಹಿಣಿಯರು ಮನಸ್ಸು ಮಾಡಿದರೆ ನಿಜಕ್ಕೂ ಹಿಡಿತ ಸಾಧಿಸಬಹುದು. ಈ ಮೂಲಕ ಮನೆಯನ್ನಷ್ಟೇ ಅಲ್ಲ ದೇಶವನ್ನೂ ಉದ್ಧಾರ ಮಾಡಬಹುದು. ಏನನ್ನಾದರೂ ಕೊಳ್ಳುವಾಗ ಈ ಕೆಳಗಿನ ಪ್ರಶ್ನೆಗಳನ್ನು ನಿಮಗೆ ನೀವೇ ಒಂದು ಸಲವಲ್ಲ ಹತ್ತು ಸಲ ಹಾಕಿಕೊಳ್ಳಿ. ವಿರಾಮದಲ್ಲಿ ಕುಳಿತು ಉತ್ತರಕ್ಕಾಗಿ ಹುಡುಕಿ. 'ಕೊಳ್ಳುವುದೆಂದು ಮನಸ್ಸು ಮಾಡಿದ್ದೇನೆ, ಶತಾಯಗತಾಯ ಕೊಳ್ಳಲೇಬೇಕು' ಎನ್ನುವ ಹಠವನ್ನು ಪಕ್ಕದಲ್ಲಿರಿಸಿ. ಹತ್ತು ಬಾರಿಯೂ ನಿಮ್ಮ ಮನಸಿಗೆ ಒಂದೇ ಉತ್ತರ ಬಂದರೆ ಆ ವಸ್ತುವಿನ ಅಗತ್ಯ ನಿಮಗೆ ಖಂಡಿತಾ ಇದೆ. ಆದರೆ ಮನಸ್ಸು ಡೋಲಾಯಮಾನವಾಗಿದ್ದು ಒಮ್ಮೆ ಬೇಕು ಎನಿಸಿ ಮತ್ತೊಮ್ಮೆ ಬೇಡ ಎನಿಸಿದರೆ ಖಂಡಿತಾ ಆ ವಸ್ತುವನ್ನು ಕೊಳ್ಳಬೇಡಿ.

ಆ ಕ್ಷಣಕ್ಕೆ ವಸ್ತು ಸಿಕ್ಕದ ನಿರಾಸೆಯಾದರೂ ಕ್ರಮೇಣ ಹಣ ದುರುಪಯೋಗವಾಗಲಿಲ್ಲ ಎನ್ನುವ ಸಂತೃಪ್ತಿಯಾದರೂ ಸಿಕ್ಕುತ್ತದೆ. ಬೇಡದ ವಸ್ತುವನ್ನು ಕೊಂಡಿರೋ, ಅದರ ಜೊತೆಯಲ್ಲಿಯೇ ಅಶಾಂತಿಯೂ ನಿಮ್ಮ ಮನೆಗೂ ಮನಸ್ಸಿಗೂ ಅಮರಿಕೊಳ್ಳುತ್ತದೆ. 'ದುಡ್ಡು ಕೊಟ್ಟು ದುಃಖ ಕೊಂಡರು' ಎನ್ನುವ ಗಾದೆಯಂತೆ !

ನೀವು ಹಾಕಿಕೊಳ್ಳಬೇಕಾದ ಹಾಗೂ ನಿಮ್ಮ ಮನೆಯವರಿಗೂ ಹಾಕಬೇಕಾದ ಪ್ರಶ್ನೆಗಳು.

1. ಈ ವಸ್ತು ನನಗೆ ಖಂಡಿತಾ ಬೇಕೇ?
2. ಇದಿಲ್ಲದೇ ಇದುವರೆಗಿನ ಬದುಕು ನಡೆದಿದೆಯಲ್ಲ ಮುಂದೆಯೂ ನಡೆಯುವುದಿಲ್ಲವೇ?
3. ಈ ವಸ್ತು ಕೊಂಡರೆ ಎಷ್ಟು ವರ್ಷ ನನಗೆ ಇದು ಸುಖ ಸಂತೋಷವನ್ನು ಕೊಡಬಹುದು?
4. ಈ ವಸ್ತು ನನಗೆ ಮಾತ್ರ ಅಗತ್ಯವೇ ಅಥವಾ ಮನೆಯ ಪ್ರತಿ ಸದಸ್ಯರಿಗೂ ಅಗತ್ಯವೇ?
5. ಈ ವಸ್ತು ನನ್ನ ಪ್ರತಿಷ್ಠೆಯನ್ನು ಮಾತ್ರ ಹೆಚ್ಚಿಸುತ್ತದೆಯೇ? ಅಥವಾ ಉಪಯುಕ್ತವೇ?

ಅಗತ್ಯವಿದ್ದರೆ ಕೊಳ್ಳೋಣ. ಬರಿಯ ಅಲಂಕಾರಕ್ಕಾಗಿ, ಪ್ರತಿಷ್ಠೆಗಾಗಿ, ತಾತ್ಕಾಲಿಕ ಸುಖಕ್ಕಾಗಿ, ಇನ್ನೊಬ್ಬರಲ್ಲಿದೆ, ನಮ್ಮಲ್ಲೂ ಇರಲಿ ಎಂಬ ಕಾರಣಕ್ಕಾಗಿ ಯಾವ ವಸ್ತುವನ್ನೂ ಕೊಂಡುಕೊಳ್ಳುವುದು ಬೇಡ ಎಂದು ಹೇಳುವವಳೇ ಜಾಣ ಗೃಹಿಣಿ. ಜಾಹೀರಾತಿನ ಮೋಡಿಗೆ ಮಾರಾಟಗಾರರ ಆಮಿಷಗಳಿಗೆ ಈ ಜಾಣ ಗೃಹಿಣಿ ಎಂದೂ ಒಳಗಾಗುವುದಿಲ್ಲ.

ಕೃಪೆ - ನವಕರ್ನಾಟಕ ಪಬ್ಲಿಕೇಶನ್ಸ್

# ಹೆಣ್ಣು ಮತ್ತು ಮೌನ

ಡಾ. - ಎಂ. ಎಸ್. ಆಶಾದೇವಿ

ಅನಸೂಯ ಸೇನ್‌ಗುಪ್ತ ಎನ್ನುವ ಭಾರತೀಯ ಕವಯತ್ರಿ ಬರೆದ 'ಮೌನ' ಎನ್ನುವ ಕವಿತೆ ಹಿಲೇರಿ ಕ್ಲಿಂಟನ್ನಳ ಕಾರಣಕ್ಕಾಗಿ ಈಗ ಜಗತ್ಪ್ರಸಿದ್ಧವಾಗಿದೆ. ಹಿಲೇರಿ ಕ್ಲಿಂಟನ್ ತನ್ನ ಆತ್ಮ ಚರಿತ್ರೆ 'ಲಿವಿಂಗ್ ಹಿಸ್ಟ್ರಿ' ಯಲ್ಲಿ ಈ ಕವನವನ್ನು ಉದ್ಧರಿಸಿದ್ದಾಳೆ ಮಾತ್ರವಲ್ಲ ತನ್ನ ಬದುಕಿನ ವ್ಯಾಖ್ಯಾನವನ್ನೇ ಅವರೊಂದಿಗೆ ಜೋಡಿಸಿದ್ದಾಳೆ. (ಈ ಕವನ ಹಿಲೇರಿ ಕ್ಲಿಂಟನ್ ಭಾರತಕ್ಕೆ ಭೇಟಿ ಕೊಟ್ಟ ಸಂದರ್ಭದಲ್ಲಿ ದೆಹಲಿಯ ಲೇಡಿ ಶ್ರೀರಾಮ್ ಕಾಲೇಜಿನ ಕೊಡುಗೆ) ಕಾವ್ಯದ ಮಾನದಂಡಗಳಿಂದ ಈ ಕವನ ಅದ್ಭುತವೇನಲ್ಲ. ಕಟು ಸತ್ಯದ ಪುನರುಚ್ಚಾರಕ್ಕಾಗಿ ಈ ಕವನ ಮುಖ್ಯ.

*Too many women*
*In too many countries*
*Speak the same language*
*of silence*

ಎಂದು ಆ ಕವನ ಆರಂಭವಾಗುತ್ತದೆ.

ಮೌನವೇ ಹೆಣ್ಣಿನ ಅಧಿಕೃತ ಭಾಷೆಯೆಂದೋ, ಹೆಣ್ಣಿಗೂ ಮೌನಕ್ಕೂ ಅವಿನಾಭಾವದ ಸಂಬಂಧವಿದೆ ಎಂದೋ ಹೇಳಿಬಿಟ್ಟರೆ ಅದೊಂದು ಸರಳೀಕೃತ ಹೇಳಿಕೆಯಾಗುತ್ತದೆ. ಮೌನ ಹೆಣ್ಣಿನ ಸ್ಥಿತಿಗತಿಯ ಮಟ್ಟಿಗೆ ಒಂದು ರೂಪಕವೂ ಹೌದು, ವಸ್ತುಸ್ಥಿತಿಯೂ ಹೌದು. ಮೌನ ಪುರುಷ ಪ್ರಧಾನ ಸಮಾಜದ ಹೆಣ್ಣಿನ ಬಹು ಅಪೇಕ್ಷಿತ ಹಾಗೂ ನಿರೀಕ್ಷಿತ ಗುಣ. ಮೌನವೇ ಹೆಣ್ಣಿನ ಆಭರಣ ಎನ್ನುವುದನ್ನು ಶತಮಾನಗಳಿಂದಲೂ ಕಲಾತ್ಮಕವಾಗಿ ಹೆಣ್ಣಿನ ಮೇಲೆ ಹೇರಲಾಗಿದೆ. ಅವಳ ಸುಖ ದುಃಖಗಳೆಲ್ಲ ಮೌನದಲ್ಲಿಯೇ ತುಂಬ ಶಕ್ತವಾಗಿ ಅಭಿವ್ಯಕ್ತವಾಗುತ್ತವೆ. (ಇತ್ತೀಚೆಗೆ ಪ್ರಕಟವಾಗಿರುವ ಡಾ. ಸೌಮಿತ್ರಾ ಚಕ್ರವರ್ತಿಯವರ ಕವನ ಸಂಕಲನದ ಶೀರ್ಷಿಕೆ Silent cry). ಆದ್ದರಿಂದಲೇ ಮೌನದ ವ್ಯಾಖ್ಯಾನ ಸರಳವಾದುದಲ್ಲ.

ಮೌನ ಏಕಮುಖಿಯಾದುದಲ್ಲ. ಬಹುಮುಖಿ ಆಯಾಮಗಳು ಅದಕ್ಕಿವೆ. ಸಾಂಪ್ರದಾಯಿಕ ನೆಲೆಯಲ್ಲಿ ಮೌನವನ್ನುಹೆಣ್ಣನ್ನುಹತ್ತಿಕ್ಕುವ ಒಂದು ಸಾಧನ, ವಿಧಾನ ಎಂದೇ ತಿಳಿಯಲಾಗುತ್ತದೆ. ದಬ್ಬಾಳಿಕೆಯ ಈ ಅಸ್ತ್ರವನ್ನು ಸಂಸಾರದ ಅಳಿವು ಉಳಿವಿನ ಹೆಸರಿನಲ್ಲಿ ಗಂಡು ಶತಮಾನಗಳಿಂದಲೂ ಯಶಸ್ವಿಯಾಗಿ ಬಳಸುತ್ತಾ ಬಂದಿದ್ದಾನೆ. ಬದುಕಿನ ನಿರ್ಣಾಯಕ ಗಳಿಗೆಗಳಲ್ಲಿ ಈಗಲೂ, ಈ ಬದಲಾದ ಕಾಲದಲ್ಲೂ ಮೌನವೇ ಬಹುಪಾಲು ಹೆಣ್ಣು ಮಕ್ಕಳಿಗೆ ಉಳಿಯುವ ಕೊನೆಯ ದಾರಿಯಾಗಿದೆ ಎನ್ನುವುದಕ್ಕೆ ಹಿಲೇರಿಯ ಪ್ರಸಂಗ ಒಂದು ಉದಾಹರಣೆ ಅಷ್ಟೇ. ಇದಕ್ಕೆ ಬೇಂದ್ರೆಯವರ ಕವನವೊಂದರಿಂದಲೂ ಸಾಕ್ಷ್ಯವನ್ನು ತೆಗೆದುಕೊಳ್ಳಬಹುದು. ಆ ಕವನ ಆರಂಭವಾಗುವುದೇ ಹೆಣ್ಣಿನ ಮಾತನ್ನು ಕೊನೆಗಾಣಿಸುವ ಆಶಯದಿಂದ. 'ಆಡದಿರು ಎನಗೆ ಇದಿರಾಡದಿರು' ಆಡಬಾರದು ಮಾತ್ರವಲ್ಲ ಇದಿರಾಡುವುದನ್ನಂತೂ ಮಾಡಲೇ ಬಾರದು. ಹೆಣ್ಣು ಹಾಗೆ ಮಾಡಿದರೆ ಏನಾಗುತ್ತದೆ? ಕವನದಲ್ಲಿಯೇ ಸ್ಪಷ್ಟವಾದ ಉತ್ತರವಿದೆ. 'ಮಲಗಿರುವ ಹಾವನ್ನು ಕೆಣಕಬೇಡ, ಕಚ್ಚಿ ವಿಷಕಾರಿದರೆ ತಿಣುಕಬೇಡ'. ಆದ್ದರಿಂದ 'ಮಾಡದಿರು ಬಾಳನ್ನು ಬೇಳೆಯಂತೆ, ಕೂಡಿರಲಿ ಬಾಳು ಇಡಿಗಾಳಿನಂತೆ'. ಎಂದರೆ ದಾಂಪತ್ಯವನ್ನು ಉಳಿಸಿಕೊಳ್ಳುವುದು ಆತ್ಯಂತಿಕವಾಗಿ ಹೆಣ್ಣಿನ ಜವಾಬ್ದಾರಿಯೇ ಎನ್ನುವ ಹಾಗೆಯೇ ಉದ್ದಕ್ಕೂ ನೋಡಲಾಗಿದೆ. ದಾಂಪತ್ಯ ಇಡಿಗಾಳಿನ ಹಾಗೆ ಉಳಿಯ ಬೇಕೆಂದರೆ ಅವಳು ಇದಿರಾಡಬಾರದು. ಹಾಗಾದಾಗ ಮಾತ್ರ ಅವಳು ಮನದನ್ನೆಯಾಗಿ ಉಳಿಯುತ್ತಾಳೆ.

ಭಾರತದಂತಹ ಸಾಂಪ್ರದಾಯಿಕ ಸಾಮಾಜಿಕ ವ್ಯವಸ್ಥೆಯ ಉಳಿವಿನಲ್ಲಿ ನಂಬಿಕೆಯಿಟ್ಟ ಸಮಾಜದಲ್ಲಿ ಇದು ಸಹಜ. ಗಂಡು ಹೆಣ್ಣಿನ ಸಂಬಂಧಗಳ ದೃಷ್ಟಿಯಿಂದ ಮುಕ್ತ ದೃಷ್ಟಿಕೋನ ಹೊಂದಿದೆ ಎಂದು ತಿಳಿಯಲಾದ ಅಮೆರಿಕಾದಲ್ಲಿಯೂ ಹಿಲೇರಿಗೆ ಉಳಿದದ್ದು ಇದೊಂದೇ ದಾರಿಯಲ್ಲವೇ. ಹಿಲೇರಿ ತನ್ನ ಕೃತಿಯಲ್ಲಿ ಹೇಳುವಂತೆ 'ಇಡೀ ಜಗತ್ತು ಅದರ ಬಗ್ಗೆ ಮಾತನಾಡುತ್ತಿದ್ದರೂ ನಾನು ಅದರ ಬಗ್ಗೆ ಮೌನವಾಗಿದ್ದೆ. ನನ್ನ ಕಣ್ಣೆದುರಿಗೆ ಬಂದದ್ದು ನನ್ನ ಮುದ್ದು ಚೆಲ್ಸಿ. ಅವಳಿಗೋಸ್ಕರ ನಾನು ಎಲ್ಲವನ್ನೂ ಮೌನವಾಗಿ ಸಹಿಸಿಕೊಳ್ಳಬೇಕಾಯಿತು'. ಕ್ಲಿಂಟನ್ ಮತ್ತು ಹಿಲೇರಿಯ ದಾಂಪತ್ಯ ಕೊನೆಗಾದರೂ ಉಳಿದದ್ದು ಹಿಲೇರಿಯ 'ಮೌನ'ದ ಕಾರಣಕ್ಕಾಗಿ. ಅದು ಅಮೆರಿಕಾದ ಹಿಲೇರಿಯಾಗಿರಬಹುದು, ಧಾರವಾಡದ ನಳಿನಿ ದೇಶಪಾಂಡೆ ಇರಬಹುದು. ಇಲ್ಲಿ ಮೌನ ಕೇವಲ ಭಾಷಿಕ ಅಭಿವ್ಯಕ್ತಿಯಲ್ಲ, ಅದನ್ನು ಮೀರಿದ ಕ್ರಿಯೆ ಎನ್ನುವುದನ್ನು ವಾಚ್ಯಾರ್ಥ ವಿವರಿಸಬೇಕಿಲ್ಲ.

ಇನ್ನು ಮೌನದ ಇತರ ಕೆಲವು ಆಯಾಮಗಳನ್ನು ನೋಡೋಣ. ನಿರ್ಧಾರ ಹಾಗೂ ಪ್ರತಿಭಟನಾ

ಮಾದರಿಗಳಲ್ಲಿಯೂ ಮೌನವನ್ನು ಗುರುತಿಸಬಹುದು. ಕೆಲವೊಮ್ಮೆ ಪುರುಷ ಪ್ರಧಾನ ಸಮಾಜದ ನಿರೀಕ್ಷೆಗೆ ವಿರುದ್ಧವಾಗಿಯೂ ಮೌನ ಕೆಲಸ ಮಾಡುತ್ತದೆ. ಮಲೆಯಾಳಂನ ಶ್ರೇಷ್ಠ ಕವಿಗಳಲ್ಲಿ ಒಬ್ಬರಾದ ಕುಮಾರನ್ ಆಶಾನ್‌ರ 'ಚಿಂತಾ ವಿಷ್ಟಯಾಯ ಸೀತಾ' ನೀಳ್ಗವನದಲ್ಲಿ ಸೀತೆ ಲವಕುಶರನ್ನು ರಾಮನ ಬಳಿಗೆ ಕಳುಹಿಸಿದ್ದಾದ ಮೇಲೆ ಒಬ್ಬಳೆ ತನ್ನ ಇಡೀ ಬದುಕನ್ನು ಕುರಿತ ಮರು ಚಿಂತನೆಗೆ ತೊಡಗುತ್ತಾಳೆ ತನ್ನೊಳಗೆ ಮೌನದಲ್ಲಿ. ರಾಮ ತನ್ನನ್ನು ಕರೆಯಲು ಬಂದೇ ಬರುತ್ತಾನೆ ಎನ್ನುವುದು ಖಚಿತವಾದ ಹಿನ್ನೆಲೆಯಲ್ಲಿ ಎಷ್ಟು ಯೋಚಿಸಿದರೂ, ಹೇಗೆ ಯೋಚಿಸಿದರೂ ಅವಳಿಗೆ ರಾಮನ ಬಳಿ ವಾಪಸ್ಸು ಹೋಗಲು ಕಾರಣಗಳು ಸಿಗುವುದಿಲ್ಲ. ಮೌನವಾಗಿಯೇ ಅವಳು ರಾಮನೊಂದಿಗೆ ಹೋಗದಿರಲು ನಿರ್ಧಾರವನ್ನು ತೆಗೆದುಕೊಳ್ಳುತ್ತಾಳೆ.

ಯಶವಂತ ಚಿತ್ತಾಲರ 'ಪುರುಷೋತ್ತಮ' ಕಾದಂಬರಿಯಲ್ಲಿ ಬರುವ ಲಕ್ಷ್ಮಿಯ ಪಾತ್ರ ಮೌನದ ಪ್ರತಿಭಟನಾ ಮಾದರಿಗೆ ಅತ್ಯುತ್ತಮ ಉದಾಹರಣೆ. ತನ್ನ ಗಂಡನ ಕ್ರೂರ ವ್ಯಕ್ತಿತ್ವಕ್ಕೆ ಪ್ರತಿಭಟನೆಯಾಗಿ ಗಂಡನ ಮನೆಯಲ್ಲಿ ಮಾತನ್ನೇ ಆಡದಿರುವ ಪ್ರತಿಜ್ಞೆ ಮಾಡಿರುತ್ತಾಳೆ ಅವಳು. ವರ್ಷಾನುಗಟ್ಟಲೇ ಹೀಗೆ ಗಂಡನ ಮನೆಯಲ್ಲಿ ಮೂಕಿಯಾಗಿ ಬದುಕು ಕಳೆದ ಅವಳನ್ನು ಮಾತನಾಡಿಸಲು ಗಂಡ ಹುಡುಕುವ ತಂತ್ರ ಯಾವುದು ಗೊತ್ತೇ? ಆ ಮನೆಯಲ್ಲೇ ಇದ್ದ ತನ್ನ ಪ್ರೇಯಸಿಯನ್ನು ಹೆಂಡತಿಯೊಂದಿಗೆ ಹಾಸಿಗೆಗೆ ಕರೆಯುವುದರ ಮೂಲಕ! ಮೌನದ ಪ್ರತಿಭಟನಾ ಮಾದಾರಿಗಳನ್ನು ಪುರುಷ ಪ್ರಧಾನ ವ್ಯವಸ್ಥೆ ಕ್ರೂರವಾಗಿ ಹತ್ತಿಕ್ಕುತ್ತದೆ.

ವೀಣಾ ಶಾಂತೇಶ್ವರರ ಕತೆಯೊಂದರಲ್ಲಿ ಉದ್ಯೋಗಸ್ಥ ಮಹಿಳೆಯೊಬ್ಬಳ ಗಂಡ ಸತ್ತು ಹೋಗುತ್ತಾನೆ. ಅವಳ ಮೌನವನ್ನು ನೋಡಿ (ಅವಳು ಅಳದಿರುವುದನ್ನು ನೋಡಿ) ಆಕೆಗೆ ಆಘಾತವಾಗಿದೆ ಎಂದು ತಿಳಿದು ಸೆಡೆಟಿವ್ ಕೊಡುತ್ತಾರೆ. ಆ ಮಂಪರಿನಲ್ಲಿಯೇ ಅವಳಿಗೊಂದು ಕನಸು ತನ್ನಂತೆಯೇ ಹೊರಗೂ ದುಡಿಯುವ ಹೆಂಡತಿಗೆ ಹೆಗಲು ಕೊಡುವ, ಅವಳ ವ್ಯಕ್ತಿತ್ವವನ್ನು ಗೌರವಿಸುವ, ಒಪ್ಪಿಕೊಳ್ಳುವ, ಅಡುಗೆ ಮನೆಯಲ್ಲಿ ಮಕ್ಕಳ ಜವಾಬ್ದಾರಿಯಲ್ಲಿ ತನ್ನ ಪಾಲನ್ನು ನಿರಾಕರಿಸದೆ ಸಂತೋಷದಿಂದ ಆ ಜವಾಬ್ದಾರಿಯನ್ನು ನಿಭಾಯಿಸುವ ಗಂಡನ ಕನಸು. ವಾಸ್ತವ ಅದಕ್ಕೆ ತದ್ವಿರುದ್ಧ. ಹೆಂಡತಿಯೆಂದರೆ ಹೊರಗೂ ಒಳಗೂ ದುಡಿಯುವ ಬಿಟ್ಟಿ ಆಳು ಎಂದು ತಿಳಿದು ಉದ್ದಕ್ಕೂ ಹಾಗೆಯೇ ನಡೆಸಿಕೊಂಡು ಬಂದವ ಅವನು. ಪೂರ್ತಿ ಎಚ್ಚರವಾದಾಗ ಅವಳು ಅಡುಗೆ ಮನೆಗೆ ಬಂದು ಒಂದು ಲೋಟ ಹಾಲಿಗೆ ಸಕ್ಕರೆ ಬೆರೆಸಿ ಕುಡಿದು ಗಂಡನ ಹೆಣದ ಬಳಿ ಮೌನವಾಗಿ ಕೂರುತ್ತಾಳೆ. ಅವಳ ಮೌನದ ಅರ್ಥವೇ ಬೇರೆ, ಮಕ್ಕಳು ಸಮಾಜ ಕೊಡುವ ಅರ್ಥವೇ ಬೇರೆ. ಈ ಕಥೆ ಪ್ರಕಟವಾದ ಮೇಲೆ ಎಷ್ಟೋ ಮಹಿಳೆಯರು ಪತ್ರ, ಫೋನಿನ ಮೂಲಕ ವೀಣಾರಿಗೆ ಇದು ನಮ್ಮದೇ ಕಥೆ ಎಂದು ಹೇಳಿದರಂತೆ!

ಸ್ತ್ರೀವಾದವನ್ನು ಸಾಮಾನ್ಯವಾಗಿ ಪುರುಷ ದ್ವೇಷ ಎಂದು ತಪ್ಪಾಗಿ ಅರ್ಥೈಸುವುದರ ಹಿಂದೆ ಶತಮಾನಗಳ ಈ ಕೊನೆಯಿಲ್ಲದ ಮೌನದ ಪಾಲೂ ಇದೆ. ಹೆಣ್ಣು ಬಾಯಿ ಬಿಡುವುದೇ ತಡ ಅವಳಿಗೆ ಪುರುಷ ದ್ವೇಷಿ, ಉಗ್ರ ಸ್ತ್ರೀವಾದಿ ಮುಂತಾದ ಬಿರುದುಗಳು ಅಂಟಿಕೊಳ್ಳುತ್ತವೆ. ತನ್ನ ವ್ಯಕ್ತಿತ್ವದ ಪರಿಗಣನೆಗಾಗಿ ಹೆಣ್ಣು ನಡೆಸುವ ಸಹಜ ಹೋರಾಟಕ್ಕೆ ಅಡೆತಡೆಗಳು ಶುರುವಾಗುವುದೇ ಈ ತಪ್ಪು ಅರ್ಥೈಸುವಿಕೆಯಿಂದ. ವಿಚಾರ ಸಂಕಿರಣವೊಂದರಲ್ಲಿ ಪ್ರಬಂಧವೊಂದನ್ನು ನಾನು ಮಂಡಿಸಬೇಕಿತ್ತು. ಗೆಳತಿಯೊಬ್ಬಳು ಫೋನ್ ಮಾಡಿದಾಗ ಸಹಜವಾಗಿಯೇ ಇದು ಪ್ರಸ್ತಾಪಿತವಾಯಿತು. ಸ್ತ್ರೀವಾದಿ ಹಿನ್ನೆಲೆಯಲ್ಲಿ ನಾನು ಪ್ರಸ್ತುತ ಪಡಿಸಬೇಕಿದ್ದ ವಿಷಯವನ್ನು ಕೇಳಿದ ಕೂಡಲೇ ಅವಳು You please come out of it ಕಣೇ ಎಂದು ಹೇಳಿದಳು. ಸರಿಯಮ್ಮ ಇದು ಯಾರಿಗೆ ಇಷ್ಟದ್ದು? ಸ್ತ್ರೀವಾದದ ಬಗ್ಗೆ ಮಾತನಾಡುವುದಾಗಲೀ, ಚರ್ಚಿಸುವುದಾಗಲೀ ನಿಜಕ್ಕೂ ನೋವಿನ ಸಂಗತಿಯೇ. ಸ್ವಪ್ರಜ್ಞೆ ಇರುವ ಯಾವ ಹೆಣ್ಣಿಗೂ ತನ್ನ ವ್ಯಕ್ತಿತ್ವ ಪರಿಗಣನೆ ಜೀವನ್ಮರಣದ ಪ್ರಶ್ನೆಯಾಗಿರುತ್ತದೆ ಎನ್ನುವ ಸರಳ ಸತ್ಯ ಯಾಕೆ ಅರ್ಥವಾಗುವುದಿಲ್ಲ?

ಆದ್ದರಿಂದಲೇ ಸ್ತ್ರೀವಾದಿ ಹೋರಾಟದ ಈ ಘಟ್ಟದಲ್ಲಿ ಪುರುಷರೂ ಮುಂಚೂಣಿಯಲ್ಲಿರಬೇಕು ಎಂದು ನಾನು ವಾದಿಸುವುದು. ಸ್ತ್ರೀಯರಿಂದ, ಸ್ತ್ರೀಯರಿಗಾಗಿ, ಸ್ತ್ರೀಯರೇ ನಡೆಸುವ ಚಳುವಳಿ ಇದು ಎನ್ನುವ ದೃಷ್ಟಿಕೋನ ಬದಲಾಗದ ಹೊರತು ಈ ಚಳುವಳಿ ಅಪೂರ್ಣವೇ. ಹೆಣ್ಣು ಮಕ್ಕಳಲ್ಲಿ 'ಸ್ವಪ್ರಜ್ಞೆ'ಯನ್ನು ಮೂಡಿಸುವುದರಷ್ಟೇ ಅಗತ್ಯವಾಗಿ ಅದನ್ನು ಒಪ್ಪಿ ಗೌರವಿಸುವ 'ಅರಿವನ್ನು' ಪುರುಷರಲ್ಲಿ ಮೂಡಿಸುವುದೂ ಆಗಬೇಕು.

ಈ ಏಕತ್ರಗೊಂಡ ಹೋರಾಟದ ಪ್ರಯತ್ನದ ಅತ್ಯುತ್ತಮ ಮಾದರಿಯೆಂದರೆ ಅಕ್ಕಮಹಾದೇವಿ ಹೇಳುವ 'ನೀನೆನ್ನ ನಾನೆನ್ನ' ಎನ್ನುವ ನಿಲುವು. ಯಾರೂ ಹೆಚ್ಚಲ್ಲದ, ಯಾರೂ ಕಡಿಮೆಯಲ್ಲದ ಮನಃಸ್ಥಿತಿ ಈ ಸಮಾಜಕ್ಕೆ ಸಾಧ್ಯವಾಗಬೇಕು. ತುಂಬ ಮುಖ್ಯವಾಗಿ ಆಧುನಿಕ ಗಂಡು-ಹೆಣ್ಣನ್ನು ಕಾಡುತ್ತಿರುವ ಅಹಂನ ಪ್ರಶ್ನೆಯೂ ಇಲ್ಲಿದೆ. ಅಹಂ ಇಲ್ಲದ ವ್ಯಕ್ತಿತ್ವ ಇಲ್ಲ ನಿಜ. ಆದರೆ ದಾಂಪತ್ಯದ ಸಾಂಗತ್ಯದಲ್ಲಿ ಇದನ್ನು ಮೀರದ ಬೇರೆ ದಾರಿಯೂ ಇಲ್ಲ. ಭಿನ್ನ ದಾರಿಗಳಿದ್ದಾಗಲೂ ಪರಸ್ಪರ ಗೌರವ ಇದ್ದಾಗ ಇದು ಸಾಧ್ಯವಾಗುತ್ತದೆ. ಮೌನ ಹೆಣ್ಣಿನ ಭಾಷೆಯಾಗಿರುವ, ಹೆಣ್ಣಿನ ವ್ಯಕ್ತಿತ್ವ taken for granted ಆಗಿರುವ ಸಮಾಜದಲ್ಲಿ ಈ ಕನಸು ನನಸಾಗುವ ಸಾಧ್ಯತೆ ಎಷ್ಟು?

# ಕನಸಿನ ಮನೆ

ಗಂಡು ಹೆಣ್ಣಿನ ನಿಷ್ಕಾಮ ಸ್ನೇಹದ ಬಗ್ಗೆ ಪ್ರೊ. ಎ.ಎನ್. ಮೂರ್ತಿರಾಯರ ಚಿಂತನೆ ಎಲ್ಲ ಕಾಲಕ್ಕೂ ಪ್ರಸ್ತುತವಾಗುತ್ತದೆ. ಈ ಲೇಖನವನ್ನು ಶ್ರೀಯುತರ 'ವಿಮರ್ಶಾತ್ಮಕ ಪ್ರಬಂಧಗಳು' ಕೃತಿಯಿಂದ ಆಯ್ದು ಪ್ರಕಟಿಸಲಾಗಿದೆ. ಇದು ಶ್ರೀ ವಿ.ಎಂ. ಇನಾಂದಾರ್‌ರವರ 'ಕನಸಿನ ಮನೆ' ಕಾದಂಬರಿಗೆ ಮೂರ್ತಿರಾಯರು ಬರೆದ ಮುನ್ನುಡಿ.

ಸಂ.

ಈಚೆಗೆ ಕನ್ನಡದಲ್ಲಿ ಕಾದಂಬರಿಯ ಬೆಳೆ ಹುಲುಸಾಗಿ ಬರುತ್ತಿದೆ. ನಮ್ಮ ಸಾಹಿತ್ಯದಲ್ಲಿ ಸಣ್ಣ ಕಥೆಯನ್ನು ಬರೆದು ಕೈಕುದುರಿದ ಮೇಲೆ ಕಾದಂಬರಿ ಬರಲಾರಂಭಿಸಿತು. ಕೆಲವು ಕಾಲ ಕಾದಂಬರಿಯನ್ನು ಬರೆಯುವುದಕ್ಕೆ ಬೇಕಾದ ಅನುಭವ ವೈಶಾಲ್ಯವೂ ಪಾತ್ರವಿಸ್ತಾರದ ಶಕ್ತಿಯೂ ನಮ್ಮ ಸಾಹಿತಿಗಳಲ್ಲಿಲ್ಲವೇನೊ ಎಂದು ಕೆಲವರು ಸಂದೇಹಪಡುತ್ತಿದ್ದರು. ಕಥನಶಕ್ತಿ ಉತ್ತಮವಾಗಿದ್ದ ಕಡೆಯಲ್ಲೂ ಒಂದೆರಡು ವೇಳೆ ಕಾದಂಬರಿಗೆ ಬೇಕಾದ ರಚನಾ ಸಾಮರ್ಥ್ಯ, ತಂತ್ರ, ಸಾಲದೆಂದು ತೋರಿತ್ತು. ಆದರೆ ಕನ್ನಡ ಕಾದಂಬರಿ ಆ ಘಟ್ಟವನ್ನು ದಾಟಿ ಎಷ್ಟೋ ವರ್ಷಗಳಾದುವು. ಮಾನವನ ಸರಳ ಗಾಂಭೀರ್ಯ, ಅವನಲ್ಲಿ ಉನ್ನತ-ಅಧಮ ಭಾವಗಳ ಹೋರಾಟ, ಅವನ ಸೋಲು ಗೆಲುವು-ಎಲ್ಲವನ್ನೂ ಸಾವಧಾನವಾಗಿ ಪರಿಶೀಲಿಸಿ ಸ್ವಭಾವ ವಿಕಾಸವನ್ನು ಸಂಪೂರ್ಣವಾಗಿ ಚಿತ್ರಿಸುವ ಕಾದಂಬರಿಗಳು ಈಗ ನಮ್ಮ ಕಣ್ಣ ಮುಂದಿವೆ. ಅಂತೆಯೇ ಮಾನವನಾಟಕಕ್ಕೆ ವಿಶಾಲವಾದ ಹಿನ್ನೆಲೆಯನ್ನು ಕಲ್ಪಿಸಿ, ಆ ಹಿನ್ನೆಲೆಯೇ ಒಂದು ವ್ಯಕ್ತಿತ್ವವನ್ನು ಪಡೆಯುವಂತೆ ಮಾಡುವ ಶಕ್ತಿ ಸಹ ಬಂದಿದೆ. ನಮ್ಮ ಮಲೆನಾಡೂ ಪಶ್ಚಿಮ ಸಮುದ್ರದ ಕರಾವಳಿಯೂ ಈಗ ಕನ್ನಡ ಸಾಹಿತ್ಯದಲ್ಲಿ ಸಜೀವ ವ್ಯಕ್ತಿಗಳಾಗಿ ಪರಿಣಮಿಸಿವೆ. ಆ ಹಿನ್ನೆಲೆಯಲ್ಲಿ ನಿಂತು ನಾಗರಿಕತೆಯ ಹೊರ ಅಲಂಕಾರಗಳಿಲ್ಲದೆ ಸರಳಜೀವನ ನಡೆಸಿ. ತಮ್ಮ ಅನುಭವ ತ್ಯಾಗ ಸಹನೆ ಪರಿಶುದ್ಧತೆಗಳಿಂದ ಭವ್ಯರಾಗಿರುವ ಪಾತ್ರಗಳೂ ಸೃಷ್ಟಿಯಾಗಿದ್ದಾರೆ.

'ಕನಸಿನ ಮನೆ'ಯಲ್ಲಿ ನಡೆದಿರುವ ಪ್ರಯತ್ನ ಇದಕ್ಕಿಂತ ಸ್ವಲ್ಪ ಬೇರೆಯಾದದ್ದು. ಇಲ್ಲಿ ಹಿನ್ನೆಲೆಯ ವೈಶಾಲ್ಯವಿಲ್ಲ ; ಅದನ್ನು ಕಲ್ಪಿಸುವುದು ಕಾದಂಬರಿಕಾರರ ಉದ್ದೇಶವೂ ಅಲ್ಲ. ಇಲ್ಲಿಯ ಪಾತ್ರಗಳು ಸರಳಜೀವಿಗಳಲ್ಲ. ಒಂದು ರೀತಿಯಲ್ಲಿ ಇವರೆಲ್ಲ 'ಸುಶಿಕ್ಷಿತ'ರೆನ್ನ ಬಹುದು - ಆಧುನಿಕ ರೀತಿಯ ವಿದ್ಯಾಭ್ಯಾಸ, ನಗರ ಜೀವನಕ್ಕೆ ಹೊಂದಿಕೊಂಡ ಸಾಮಾಜಿಕ ವ್ಯವಹಾರದ ತಿಳಿವಳಿಕೆ - ಇದೇ ಸುಶಿಕ್ಷಿತರ ಚಿಹ್ನೆ ಎನ್ನುವುದಾದರೆ. ಇದು ಸಾಮಾಜಿಕ ಕಾದಂಬರಿ. ಇಲ್ಲಿಯ ವ್ಯಕ್ತಿಗಳು ಮಾನವ ಸಹಜವಾದ ನಗ್ನಗಾಂಭೀರ್ಯದಿಂದ ಜೀವನವನ್ನು ಎದುರಿಸುತ್ತಾರೆನ್ನುವುದಕ್ಕಿಂತ, ಈಗಿನ ನಾಗರಿಕತೆಗೆ ಸಹಜವಾದ ಆಂದೋಲನಕ್ಕೆ ಸಿಕ್ಕಿ ಸಮಾಜ ಜೀವನವನ್ನೆದುರಿಸಿ ನಿಲ್ಲುತ್ತಾರೆ ಎನ್ನಬಹುದು.

ಕೆಲವು ವರ್ಷಗಳ ಹಿಂದೆ ನಮ್ಮ ಜೀವನದಲ್ಲಿ ಸಾಮಾನ್ಯವಾಗಿ ಕಾಣದಿದ್ದ ಹೊಸ ಯೋಚನೆಗಳೂ ಆದರ್ಶಗಳೂ ಈಗ ನಮ್ಮ ಗಮನವನ್ನು ಸೆಳೆಯುತ್ತಿವೆ. ಈಗಿನ ನಾಗರಿಕತೆ ಹೊಸ ಸಮಸ್ಯೆಗಳನ್ನು ತಂದೊಡ್ಡಿದೆ. ಇವು ತೀರ ಹೊಸದಲ್ಲವೆಂದರೂ ಈಗ ಹೆಚ್ಚು ಪ್ರಾಮುಖ್ಯವನ್ನು ಪಡೆದಿವೆ ಎನ್ನಬಹುದು. ಸಂಪ್ರದಾಯದ ಮತ್ತು ಸಮಾಜದ ನಿಯಮಗಳನ್ನೊಪ್ಪಿ ಕೊಂಡು, ಅವುಗಳ ನಿರ್ಬಂಧಕ್ಕೆ ಒಳಪಟ್ಟು, ಬಂದದ್ದನ್ನು ಅನುಭವಿಸುವ ತಾಳ್ಮೆಯೂ ಸಹನೆಯೂ ಈಗ ಮೊದಲಿನಷ್ಟು ಕಾಣುವುದಿಲ್ಲ. ಆ ನಿಯಮಗಳು ಸರಿಯೆ ಎಂದು ಕೇಳುತ್ತೇವೆ. ಮುಖ್ಯವಾಗಿ ದಾಂಪತ್ಯ ಜೀವನಕ್ಕೆ ಸಂಬಂಧಪಟ್ಟ ಅನೇಕ ಜಟಿಲ ಪ್ರಶ್ನೆಗಳು ತಲೆದೋರಿವೆ. 'ತರುಣಿಗೆ ಪತಿ ದೈವಂ' ಎಂಬ ನಂಬಿಕೆಯಿಂದ ಹೆಂಗಸರು ಕಷ್ಟವೋ ನಿಷ್ಠುರವೋ ಏನು ಬಂದರೂ ಹಲ್ಲುಕಚ್ಚಿಕೊಂಡು ಅನುಭವಿಸುವುದು ಈಗ ಮೊದಲಿನಷ್ಟು ಸಾಮಾನ್ಯವಲ್ಲ. 'ದೈವ' ಎನ್ನಿಸಿಕೊಳ್ಳುವ ಯೋಗ್ಯತೆ ಪತಿಗೆ ಇರಬೇಡವೆ? - ಎಂದು ಈಗಿನ ತರುಣಿ ಪ್ರಶ್ನೆ ಹಾಕುತ್ತಾಳೆ. ಗಂಡನು ಹೆಂಡತಿಯಲ್ಲಿ ಅಪೇಕ್ಷಿಸುವ ಹೃದಯ ಮಾರ್ದವವನ್ನೂ ಸಹನೆಯನ್ನೂ ಹೆಂಡತಿ ಗಂಡನಲ್ಲೂ ಅಪೇಕ್ಷಿಸುವುದು ಸಹಜವೇ ಅಲ್ಲವೆ? ಗಂಡನಿಗಾಗಿ ತನ್ನ ವ್ಯಕ್ತಿತ್ವವನ್ನು ಸಂಪೂರ್ಣವಾಗಿ ಬಲಿ ಕೊಡಬೇಕೆ? ಅವನ ಬಂಧುವರ್ಗದವರಿಗೆಲ್ಲ ದಾಸಿಯಾಗಿರಬೇಕೆ? ವ್ಯಕ್ತಿಗೆ ಸ್ವಾತಂತ್ರ್ಯವೇ ಬೇಡವೆ?

'ಕನಸಿನ ಮನೆ' ಈ ಸಮಸ್ಯೆಗಳನ್ನುಳ್ಳ ಆಧುನಿಕ ಸಮಾಜದಲ್ಲಿ ಕಟ್ಟಿದ್ದು. ಇಲ್ಲಿಯ ಪ್ರಧಾನ ವ್ಯಕ್ತಿಗಳಾದ ಮೋಹಿನಿ, ವಸಂತ, ಆನಂದರಾಯ, ಇವರು ಎದುರಿಸುವುದು ದೈವವನ್ನಲ್ಲ, ಪ್ರಕೃತಿಯನ್ನಲ್ಲ - ಈ ಸಾಮಾಜಿಕ ಸಮಸ್ಯೆಗಳನ್ನು. ಮೋಹಿನಿ ವಿದ್ಯಾವತಿ ; ದಾಂಪತ್ಯದಲ್ಲಿ ಸುಖವನ್ನು ಬಯಸಿದಳು. ಅವಳ ಗಂಡ ಆನಂದರಾಯ ಬಂಧುಗಳ ಕೈಗೊಂಬೆಯಾಗದಿದ್ದರೆ, ಕೇಡಿಗನಾದ ತನ್ನ ಅಣ್ಣ ಭಾಸ್ಕರನ ಚಾಡಿ ಮಾತುಗಳಿಗೆ ಕಿವಿಗೊಟ್ಟು ಹೆಂಡತಿಯನ್ನು ಸಂಕಟಪಡಿಸದಿದ್ದರೆ, ಆ ಸುಖ ಸುಲಭವಾಗಿ ದೊರೆಯಬಹುದಾಗಿತ್ತು. ಆದರೆ ಆನಂದರಾಯ ಸ್ವಭಾವತಃ ಒಳ್ಳೆಯವನಾದರೂ ಅವನಿಗೆ ಚಿತ್ತಸ್ಥೈರ್ಯವಿಲ್ಲ. ಮೋಹಿನಿಗೆ ಒಂದು ಕಡೆ ಬಂಧುಗಳ ಕಿರುಕುಳ, ಭಾಸ್ಕರನ

ದುಷ್ಕಾಮ, ಇಲ್ಲಸಲ್ಲದ ಅಪವಾದ ; ಮತ್ತೊಂದು ಕಡೆ ಗಂಡನ ಔದಾಸೀನ್ಯ, ಕೆಲವು ವೇಳೆ ಅವನ ಕ್ರೌರ್ಯ ಮತ್ತು ಪಾಶವೀ ವೃತ್ತಿ. ಗಂಡನಲ್ಲಿ ಕಾಣದ ಮರುಕವನ್ನು ಅವನ ಸ್ನೇಹಿತ ವಸಂತನಲ್ಲಿ ಅರಸಿ ಅವನ ಸಲಹೆಯನ್ನೂ ಸಹಾಯವನ್ನೂ ಬೇಡುತ್ತಾಳೆ. ಹಾಗೆ ಬೇಡುವುದರಲ್ಲಿ ಕೆಟ್ಟದೇನೂ ಇಲ್ಲ. ವಸಂತನಿಗೂ ಆಕೆಯ ಗಂಡನೊಡನೆ ಮಾತಾಡಿ ಅವನ ಸಂಸಾರವನ್ನು ನೇರಮಾಡಲು ಪ್ರಯತ್ನಿಸಬೇಕೆಂಬ ಇಚ್ಛೆ. ಈ ವಿಷಯವನ್ನು ಚರ್ಚಿಸುವ ಉದ್ದೇಶದಿಂದ ವಸಂತ - ಮೋಹಿನಿಯರು ಮೂರು ನಾಲ್ಕ ಬಾರಿ ಸೇರುತ್ತಾರೆ.

ಮೋಹಿನಿ ಹೇಳುವಂತೆ ''ಒಂದು ಗಂಡು ಒಂದು ಹೆಣ್ಣು ಕಾಮದ ಹೊರತು ಬೇರೆ ಯಾವ ಸಂಬಂಧದಲ್ಲಿಯೂ ಇರಲಾರರೆಂಬುದು'' ಸಮಾಜಕ್ಕೆ ''ಪರಂಪರಾಗತವಾಗಿ ನಡೆದು ಬಂದ ಬುದ್ಧಿ'' - ಇದೇ ಅವಳ ಗಂಡ ಆನಂದರಾಯನ ಮತ್ತು ಅವನ ಬಂಧುಗಳ ನಂಬಿಕೆ ; ಭಾಸ್ಕರನಿಗಂತೂ ಈ ನಂಬಿಕೆ ಇರುವುದು ಸಹಜವೇ. ಅವನ ಜೀವನದಲ್ಲಿ ಕಾಮವೊಂದು ಹೊರತು ಬೇರೆ ಯಾವುದಕ್ಕೂ ಸ್ಥಾನವೇ ಇಲ್ಲ. ಅವನು ಸ್ವಂತ ತಮ್ಮನ ಹೆಂಡತಿಯಾದ ಮೋಹಿನಿಯನ್ನೇ ಬಯಸಿದವನಲ್ಲವೇ! ಆದ್ದರಿಂದ ವಸಂತ-ಮೋಹಿನಿಯರು ಹಲವು ಬಾರಿ ಕಲೆತು ಮಾತಾಡಿ ಹೋಟಲಿನಲ್ಲಿ ಒಟ್ಟಿಗೆ ಊಟ ಮಾಡಿದ್ದು, ಜುಹುವಿನಲ್ಲಿ ಕಾಲಕಳೆದದ್ದು - ಎಲ್ಲ ಸಂಶಯಕ್ಕೆ ಎಡೆಗೊಟ್ಟಿತು.

ಕಾಮದ ಕಳಂಕವಿಲ್ಲದೆ ಗಂಡು-ಹೆಣ್ಣು ಸ್ನೇಹದಲ್ಲಿ ಇರಬಹುದಾದರೆ ಜೀವನದ ಚೆಲುವು ನೂರುಮಡಿ ಹೆಚ್ಚುತ್ತದೆ, ಸಂಶಯವಿಲ್ಲ. ಹಾಗಾಗಿರುವುದು ಅಸಾಧ್ಯವೂ ಅಲ್ಲ. ಸಮಾಜವೇನೋ ಯಾವಾಗಲೂ ಗಂಡು-ಹೆಣ್ಣಿನ ಸ್ನೇಹವನ್ನು ಸಂಶಯ ದೃಷ್ಟಿಯಿಂದಲೇ ನೋಡುತ್ತದೆ. ಆದರೆ ಸಮಾಜಕ್ಕೆ ''ಪರಂಪರಾಗತವಾಗಿ ನಡೆದು ಬಂದ ಬುದ್ಧಿ'' ಕೇವಲ ಹುಚ್ಚೆಂದು ಹೇಳುವ ಹಾಗೂ ಇಲ್ಲ. ಗಂಡು-ಹೆಣ್ಣಿನ ಸಂಬಂಧ ಅತಿ ಕಷ್ಟಕರವಾದದ್ದು. ಚೆಲುವಿನ ದೇಹದಲ್ಲೂ ಆ ಚೆಲುವನ್ನು ನೋಡುವ ಕಣ್ಣಿನಲ್ಲೂ ನೆತ್ತರು ಬಿಸಿಯಾಗಿದೆ. ಮಣ್ಣಿನಲ್ಲಿ ಬೆಳೆದ ಗಿಡಕ್ಕೆ ಮಣ್ಣಿನ ಅಂಶ ಅಂಟದೆ ಇರುವುದಿಲ್ಲ. ಅಲ್ಲದೆ, ಕಾಮ ನಮ್ಮ ಮೇಲೆ ದಾಳಿಯಿಟ್ಟು ಬರುವಾಗ ತನ್ನ ನಿಜರೂಪದಲ್ಲಿ ಬರುವುದಿಲ್ಲ ; ನಾನಾ ರೀತಿಯಲ್ಲಿ ಸೋಗು ಹಾಕಿಕೊಂಡು ಬರುತ್ತದೆ. ''ಗಂಡು ಹೆಣ್ಣು ಸೇರಬೇಕಾದರೆ ಒಂದೇ ಉದ್ದೇಶದಿಂದಲ್ಲ'' ಎಂದು ನಮ್ಮ ಕಿವಿಯಲ್ಲಿ ಉಸಿರುವಾಗಲೂ ತನ್ನೊಳಗೇ ನಗುತ್ತಿರುತ್ತದೆ. ''ಹೆಣ್ಣು ಕಷ್ಟದಲ್ಲಿರುವಾಗ ಅನುಕಂಪ ತೋರಿಸಬೇಡವೆ?'' ಎಂದು ಕೇಳಿ ತನ್ನಲ್ಲಿ ತಾನು ಕಣ್ಣು ಮಿಟುಕಿಸುತ್ತದೆ. ಅನುಕಂಪದಿಂದ ಪ್ರೇಮಕ್ಕೆ - ಪ್ರೇಮ ವೇಷ ಹಾಕಿರುವ ಕಾಮಕ್ಕೆ - ಒಂದೇ ಹೆಜ್ಜೆ. ಮೋಹಿನಿ ರೂಪವತಿಯಲ್ಲದಿದ್ದರೆ ವಸಂತ ಆಕೆಯ ಸಹಾಯಕ್ಕೆ ಅಷ್ಟು ಉತ್ಸಾಹದಿಂದ ಮುಂದೆ ಬರುತ್ತಿರಲಿಲ್ಲ. ಪದೇ ಪದೇ ಅವಳನ್ನು ನೋಡುವುದಕ್ಕೆ ಗಂಟೆಗಟ್ಟಲೆ ರಸ್ತೆಯಲ್ಲಿ ಕಾದಿರುತ್ತಿರಲಿಲ್ಲ. ವಿವೇಕವನ್ನು ಅದುಮಿ ಅವರಿಬ್ಬರ ನಡುವೆ ಕಾಮ ಬೃಹದಾಕಾರವನ್ನು ತಾಳುತ್ತದೆ. ಅವರಿಬ್ಬರ ಸ್ನೇಹದ ನಿಜಸ್ವರೂಪ ಮೋಹಿನಿಗೆ ಕನಸಿನಲ್ಲಿ ಸ್ಪಷ್ಟವಾಗಿ ಗೋಚರವಾಯಿತು. ಹಾಗಾದ ಮೇಲೆಯೂ ಅವಳು ವಸಂತನೊಡನೆ ಮೊದಲಿಗಿಂತ ಹೆಚ್ಚಿನ ಸಲಿಗೆಯಿಂದಲೇ - ಸ್ವಲ್ಪ ಮಟ್ಟಿಗೆ ಸ್ವಾಚ್ಛಂದ್ಯದಿಂದಲೇ ಎಂದರೂ ತಡೆಯುತ್ತದೆ - ವರ್ತಿಸಿದಳು. ಅಂದಮೇಲೆ ಸಮಾಜದ ''ಪರಂಪರಾಗತವಾದ ಬುದ್ಧಿ'' ಅಷ್ಟೇನೂ ಮರುಳುತನವಲ್ಲ ಎಂದು ವಸಂತ ಮೋಹಿನಿಯರೇ ಸಮರ್ಥಿಸಿದಂತಾಯಿತು. ಮೋಹಿನಿಯನ್ನು ಒಂದು ಸಂಕಟದಿಂದ ಪಾರಾಗಿಸಲು ಹೊರಟ ವಸಂತ ಆಕೆಯನ್ನು ಅದಕ್ಕಿಂತ ಭಯಂಕರವಾದ ಸಂಕಟಕ್ಕೆ ಎಳೆಯುತ್ತಿದ್ದ. ಆ ಎಳೆತ ಅವಳಿಗೂ ಹಿತಕರವಾಗಿಯೇ ತೋರಿತು. ವಸಂತನ ಮೊದಲಿನ ಉದ್ದೇಶವಾದರೋ ಗಂಡಹೆಂಡಿರನ್ನು ಒಟ್ಟಿಗೆ ಕೂಡಿಸುವುದು. ಆದರೆ ಪರಿಣಾಮದಲ್ಲಿ ಮೋಹಿನಿ ಗಂಡನ ಸಂಬಂಧವನ್ನು ಕಡಿದು ಹೊರಟದ್ದಕ್ಕೆ ವಸಂತನೇ ಹತ್ತಿರದ ಕಾರಣವಾದಂತಾಯಿತು. ಅವರಿಬ್ಬರ ಸಂಬಂಧ ತೀರ ಕೆಟ್ಟು ಪಾಪದಲ್ಲಿ ಪರ್ಯವಸಾನಹೊಂದದೆ ಇದ್ದದ್ದು ಅವರ ಸುದೈವ. ಇದನ್ನೆಲ್ಲ ಶ್ರೀ ಇನಾಂದಾರರು ಸ್ಪಷ್ಟವಾಗಿ ಚಿತ್ರಿಸಿದ್ದಾರೆ.

''ಪರಂಪರಾಗತವಾದ ಬುದ್ಧಿ''ಯನ್ನು ಹಳಿದು ವ್ಯಕ್ತಿಯನ್ನು ಎತ್ತಿ ಹಿಡಿಯುವುದು ಅತಿ ಸುಲಭವಾದ ಕೆಲಸ. ಈ ಬಗೆಯ ಕೂಗು ಸಾಕಾದಷ್ಟು ಕೇಳಿಬಂದಿದೆ. ಆದರೆ ಸಮಸ್ಯೆ ಎಷ್ಟು ಜಟಿಲವಾದದ್ದೆಂಬುದನ್ನು ಬಲ್ಲ ಇನಾಂದಾರರು ಈ ಸುಲಭದ ಹಾದಿಯನ್ನು ತುಳಿದಿಲ್ಲ. ಸಮಾಜವನ್ನು ಟೀಕಿಸಿ ಅದರ ಹುಳುಕುಗಳನ್ನು ತೋರಿಸಿದ್ದಾರೆ ; ಆದರೆ ವ್ಯಕ್ತಿಯನ್ನು ಸಿಂಹಾಸನಕ್ಕೇರಿಸುವ ಸಾಹಸ ಮಾಡಿಲ್ಲ. ದಾಂಪತ್ಯ ಜೀವನದಲ್ಲಿ ಮುಖ್ಯವಾಗಿರಬೇಕಾದದ್ದು ಪ್ರೇಮ - ದೇಹವಿನಿಮಯ ಮಾತ್ರವಲ್ಲ - ಎಂಬ ನಂಬಿಕೆ ಬೆಳೆಯಲೇಬೇಕು. ವ್ಯಕ್ತಿ ತನ್ನ ಆತ್ಮವಿಕಾಸಕ್ಕೆ ಗಮನ ಕೊಡಲೂ ಬೇಕು. ಆದರೆ 'ಮಾರ' ನಮ್ಮನ್ನು ಸೆರೆಹಿಡಿಯುವಾಗ ಇಂಥ ಉದಾತ್ತ ಭಾವನೆಗಳನ್ನೇ ಮುಂದಿಟ್ಟುಕೊಂಡು ಉಪನಿಷತ್ತುಗಳನ್ನು ಉದಾಹರಿಸಿಕೊಂಡೇ ಬರುತ್ತಾನೆ. ಇದನ್ನು ಮರೆಯಬಾರದು. ಇದನ್ನು ಸ್ಪಷ್ಟಗೊಳಿಸಿರುವುದಕ್ಕಾಗಿ ಶ್ರೀ ಇನಾಂದಾರರು ಅಭಿನಂದನೀಯರು.

ಸ್ವಾತಂತ್ರ್ಯದ ಮಾತು ಬಂದಾಗಲೂ ಅವರು ಆ ಶಬ್ದದ ಮಾಧುರ್ಯಕ್ಕೆ ಮರುಳಾಗಿಲ್ಲ. ಮೋಹಿನಿಗೆ ಸಿಕ್ಕಿದ ಸ್ವಾತಂತ್ರ್ಯ ಅವಳು ಬಯಸಿದ ರೀತಿಯಲ್ಲಿ ಬರುವುದಿಲ್ಲ. ಹಾಗೆ ಬರುವುದು

ಎಲ್ಲಿಯೂ ಅಪರೂಪ. ಬಯಸಿದಾಗ ಮನೋಹರವಾಗಿ ಕಂಡ ಸ್ವಾತಂತ್ರ್ಯ ಬಂದಾಗ ಎದೆ ನಡುಗಿಸುತ್ತದೆ. ಮೋಹಿನಿ ಸ್ವಾತಂತ್ರ್ಯವನ್ನು ಪಡೆದರೂ ಅವಳಲ್ಲಿ ಸ್ವಾತಂತ್ರ್ಯದ ಭೀತಿ ತಲೆದೋರಿತು. ಅಲ್ಲದೆ ''ಬಂಧನವಿಲ್ಲದೆ ಬದುಕಿಲ್ಲ'' ಎಂಬುದು ಅವಳಿಗೆ ಮನವರಿಕೆಯಾಯಿತು. ವಸಂತ - ಮೋಹಿನಿಯರ ಮುಂದಿನ ಜೀವನ ಹೇಗೇ ಸಾಗಲಿ, ಅವರ ಅನುಭವದಿಂದ ಇಬ್ಬರ ಆತ್ಮಕ್ಕೂ ಪುಷ್ಟಿ ಬಂದಿರಬೇಕು. ಮನಸ್ಸಿನಲ್ಲಿ ಅಡಗಿದ್ದ ಕಲುಷಿತವಾದ ಆಸೆಯನ್ನು ಅವರು ಹೊರಗೆಳೆದಂತಾಯಿತು. ರಾಗೋದ್ರೇಕದ ಮುಂದೆ ವಿವೇಕ ಎಷ್ಟು ದುರ್ಬಲವಾಗ ಬಹುದೆಂದು ಸಕಾಲದಲ್ಲಿ ತಿಳಿದಂತಾಯಿತು. ಈ ತಿಳಿವು ಬಹುಶಃ ವಸಂತನಿಗಿಂತ ಮೋಹಿನಿಯಲ್ಲಿ ಚೆನ್ನಾಗಿ ಕಾಣುತ್ತದೆ.

ಅದಕ್ಕಾಗಿ ಹೆಚ್ಚು ಬೆಲೆಯನ್ನು ಕೊಟ್ಟವಳೂ ಅವಳೇ.

ದಾಂಪತ್ಯ ಜೀವನದ ಮತ್ತು ಗಂಡು-ಹೆಣ್ಣಿನ ಪ್ರೇಮದ ಸಮಸ್ಯೆಯನ್ನು ತುಲನಾತ್ಮಕ ದೃಷ್ಟಿಯಿಂದ ನೋಡಿ, ಕಲೆಗಾರರಿಗೆ ಸಹಜವಾದ ರೀತಿಯಲ್ಲಿ ಕಥೆಯನ್ನು ನಿರೂಪಿಸಿ ಶ್ರೀ ಇನಾಂದಾರರರು ನಮಗೆ ಉಪಕಾರ ಮಾಡಿದ್ದಾರೆ. ಸಮಸ್ಯೆಯನ್ನು ಬಗೆಹರಿಸಿದ್ದಾರೆಯೆ ಎಂಬ ಪ್ರಶ್ನೆ ಇಲ್ಲಿಸಲ್ಲದು. ಅದು ಕಾದಂಬರಿಕಾರರು ಮಾಡಲೇಬೇಕಾದ ಕೆಲಸವಲ್ಲ. ಅದರ ಸ್ವರೂಪವನ್ನು ಜೀವನಚಿತ್ರಗಳ ಮೂಲಕ ನಮ್ಮೆದುರಿಗಿಟ್ಟರೆ ಅವರ ಕೆಲಸ ತೀರಿತು. ಈ ಕೆಲಸದ ನಿರ್ವಹಣೆ ಚೆನ್ನಾಗಿ ನಡೆದಿದೆಯೆಂದು ಓದುಗರಿಗೆ ಅನ್ನಿಸದಿರದು.

## ಅಯ್ಯಪ್ಪನ ಅವಾಂತರ !

- ಶಾಂತಾಮಣಿ

ನಟಿ ಜಯಮಾಲಾ ಸುಮ್ಮನಾಗಿದ್ದಾರೆ ಕೋರ್ಟು 'ಹೆಂಗಸರಿಗೂ ದೇವಾಲಯದಲ್ಲಿ ಪ್ರವೇಶ ನೀಡಬೇಕು' ಎಂದು ಆದೇಶ ನೀಡಿದೆ. ಕೇರಳ ಸರ್ಕಾರ ನಮ್ಮದೇನೂ ಅಭ್ಯಂತರವಿಲ್ಲ ಹೆಂಗಸರು ಧಾರಾಳವಾಗಿ ದೇವಾಲಯಕ್ಕೆ ಹೋಗಲಿ ಎಂದು ತನಗೂ ಈ ಪ್ರಕರಣಕ್ಕೂ ಸಂಬಂಧವೇ ಇಲ್ಲ ಎನ್ನುವಂತಹ ಹೇಳಿಕೆ ನೀಡಿದೆ. ಅಯ್ಯಪ್ಪ ದೇವಾಲಯದ ದೇವಸ್ವಂ ಮಂಡಲಿ ಮಾತ್ರ ''ಯಾರೇ ಕೂಗಾಡಲೀ ಊರೇ ಹೋರಾಡಲಿ ನಮ್ಮ ಪದ್ಧತಿಗೆ ಭಂಗವಿಲ್ಲ, ಹೆಣ್ಣಿಗಿಲ್ಲಿ ಪ್ರವೇಶವಿಲ್ಲ'' ಎಂದೇ ಪಟ್ಟು ಹಿಡಿದು ಹಾಡುತ್ತಾ ಕುಳಿತಿದೆ. ಇದು ಬುರ್ರನೆ ನೊರೆಯಂತೆ ಮೇಲೆದ್ದು ಅಷ್ಟೇ ಸರ್ರನೆ ನೆಲಕಚ್ಚಿದ ಪ್ರಸಂಗ. ಎಲ್ಲರೂ ಮಾತುಗಳ ಮಹಾಪೂರ ಹರಿಸಿ 'ತಮ್ಮ ಪಾಲಿನ ಕರ್ತವ್ಯ ಮುಗಿಯಿತು' ಎಂಬಂತೆ ಬೆನ್ನು ತಿರುಗಿಸಿದ್ದಾರೆ. ನಂಬಿಕೆ ಮಾತ್ರ ಒಂದಿಂಚೂ ಅಲುಗಾಡಿಲ್ಲ. ಅಯ್ಯಪ್ಪನ ದೇವಾಲಯಕ್ಕೆ ಹೆಣ್ಣು ಮಾರು ದೂರವೇ!.

ಈ ತರಂಗಗಳು ಮೇಲೇಳುತ್ತಿದ್ದಾಗ ಸೂಕ್ಷ್ಮ ಮನಸ್ಸಿನ ಸಾಹಿತಿಗಳೂ, ಪತ್ರಕರ್ತರೂ, ಬೆರಳೆಣಿಕೆಯ ಸನ್ಯಾಸಿಗಳೂ ಬಹಳಷ್ಟು ಮಹಿಳೆಯರೂ ಕೆಲವು ವಾದ ವಿವಾದಗಳನ್ನು ಮಂಡಿಸಿದ್ದರು. ಅವುಗಳಿಗೆ ಪ್ರತ್ಯಕ್ಷ ದರ್ಶಿಯಾಗಿ, ಕೆಲವನ್ನು ಓದಿ ತಿಳಿದ, ಚಿಂತಿಸಿದ, ಚರ್ಚಿಸಿದ, ಕೆಲವು ಮಾತುಗಳು ಈ ಕೆಳಕಂಡಂತೆ ಇದೆ. ಇದು ಯಾರು ಯಾವಾಗ ಎಲ್ಲಿ ಹೇಳಿದ್ದು ಎನ್ನುವುದು ಇಲ್ಲಿ ಮುಖ್ಯವಲ್ಲ. ಹೀಗೊಂದು ವಾದ, ಭಾವ, ಅನಿಸಿಕೆ, ಚರ್ಚೆ ಹೊರಬಂದು, ನಮ್ಮೊಳಗಿನ ಭಾವಕೋಶಕ್ಕೆ ಪ್ರಚೋದನೆ ನೀಡಿದ್ದು ಎನ್ನುವ ಅಂಶ ಮಾತ್ರ ಮುಖ್ಯ ಎನ್ನುವ ಕಾರಣಕ್ಕೆ ಯಾರು ಯಾವುದನ್ನು ಹೇಳಿದರು ಎನ್ನುವುದನ್ನು ಇಲ್ಲಿ ಪ್ರತ್ಯೇಕವಾಗಿ ಹೆಸರಿಸಿಲ್ಲ.

ಹೆಣ್ಣು-ಗಂಡು ಸೃಷ್ಟಿಯಾದಾಗಿನಿಂದ ಪ್ರಥಮ ಸ್ಥಾನಕ್ಕಾಗಿ ಹೋರಾಟ ಮತ್ತು ತಾನೇ ಉತ್ತಮ ಎನ್ನುವ ಗಂಡಿನ ಅಹಂ, ಇದನ್ನು ಮೆರೆಯಲು ಹೆಣ್ಣಿನ ಶೋಷಣೆ, ಇವು ಅನಾದಿ ಕಾಲಗಳಿಂದ ನಡೆದುಕೊಂಡೇ ಬಂದಿದೆ. ಜಗತ್ತಿನ ಎಲ್ಲ ಧರ್ಮಗಳೂ ಪುರುಷನಿಂದ ಸ್ಥಾಪಿತವಾದವು. ಆದ್ದರಿಂದಲೇ ಹೆಣ್ಣಿಗೆ ಕಡೆಯ ಸ್ಥಾನ! ಮತ್ತು 'ಎಲ್ಲ ಪಾಪಕ್ಕೂ ಮೂಲ ಹೆಣ್ಣು' ಎನ್ನುವುದು ಗಂಡಿನ ಹುನ್ನಾರ (ಆಡಂ ಮುಗ್ಧನಾಗಿದ್ದ ಈವ್ ಸೇಬನ್ನು ತಿನ್ನೋಣ ಎಂದು ಪ್ರಚೋದಿಸಿದ್ದರಿಂದಲೇ ಅವನು ಪಾಪ ಮಾಡಿದ) ಹೀಗೆ ಗಂಡು ತಾನು 'ಉತ್ತಮ' ಎಂದು ಬೀಗಿ ಭಾವಿಸುವಾಗಲೇ ಒಂಬತ್ತು ತಿಂಗಳು ಗರ್ಭ ಹೊತ್ತು, ನೋವು ತಿಂದು ಹಡೆದು, ಹಲವಾರು ತಿಂಗಳು ಹಾಲೂಡಿ, ಮಗುವಿನ ಮಾತೃಸ್ಥಾನ ಗಟ್ಟಿ ಮಾಡಿಕೊಳ್ಳುವ ಹೆಣ್ಣು ತೆರೆಯ ಮರೆಯಲ್ಲೇ ಉಳಿದು ಬಿಡುವ ಪಿತೃ ಸ್ಥಾನವನ್ನು ಕೆಣಕುತ್ತಾಳೆ. ಈ ಕೆಣಕುವಿಕೆಯ ನೋವನ್ನು ಪುರುಷ ಲಕ್ಷ ಲಕ್ಷ ವರ್ಷಗಳಾದರೂ ಮರೆಯಲಾಗಿಲ್ಲ ಸ್ವೀಕರಿಸಲಾಗಿಲ್ಲ, ತಡೆಯಲಾಗಿಲ್ಲ. ಈ ನೋವು ಪ್ರತಿ ಪೀಳಿಗೆಯಲ್ಲೂ ಸವಾಲಾಗಿ ಪುರುಷಹಂಕಾರವನ್ನು ಚುಚ್ಚುತ್ತದೆ. ಹೆಣ್ಣನ್ನು ಪಾಪದ ಮೂಲವಾಗಿಸುವ ಮಹಾಕಾವ್ಯಗಳು ಹುಟ್ಟಿಕೊಳ್ಳುತ್ತವೆ. ಧರ್ಮದ ಮುಖಾಂತರ

ಹೆಣ್ಣಿನ ಮೇಲೆ ಒತ್ತಡಗಳನ್ನು ಹೇರಲಾಗುತ್ತದೆ. ಎಲ್ಲೆಲ್ಲಿ ಎಷ್ಟೆಷ್ಟು ಸಾಧ್ಯವೋ ಅಷ್ಟಷ್ಟು ಹೆಣ್ಣನ್ನು ಕುಬ್ಜವಾಗಿಸುವ ಪ್ರಯತ್ನ ಜಗತ್ತಿನ ಎಲ್ಲಾ ಮೂಲೆ ಮೂಲೆಗಳಲ್ಲಿ ಎಲ್ಲ ಕಾಲಗಳಲ್ಲಿ ನಡೆಯುತ್ತಲೇ ಬಂದಿದೆ. ಗ್ರೀಕ್ ಸೈನಿಕರು ಯುದ್ಧಗಳಿಗೆ ತೆರಳುವ ಮುನ್ನ ತಮ್ಮ ಹೆಂಡತಿಯರ ಜನನಾಂಗಕ್ಕೆ ಕಬ್ಬಿಣದ ಪೆಟ್ಟಿಗೆ ಮಾಡಿಸಿ ಅದಕ್ಕೆ ಬೀಗ ಹಾಕಿ ತಮ್ಮೊಂದಿಗೆ ಬೀಗದ ಕೈ ಒಯ್ಯುವುದರಿಂದ ಹಿಡಿದು, ಭಾರತದಲ್ಲಿ ಯುದ್ಧದಲ್ಲಿ ಮಡಿದ ಸೈನಿಕರ ಚಿತೆಗಳಿಗೆ ಅವರ ಹೆಂಡತಿಯರನ್ನು ಎಸೆದು ಸುಡುವವರೆಗೆ, ಇಂಥ ಕೃತ್ಯಗಳು ನಡೆದಿವೆ, ನಡೆಯುತ್ತಲೇ ಇದೆ.

ಹೆಣ್ಣಿನ ಮಾತೃಸ್ಥಾನ ಗಂಡನ್ನು ಯಾವ ಪರಿ ಕಾಡಿದೆ ಎಂದರೆ ಒಂದೆಡೆ ಪತ್ರಕರ್ತ ಖುಷವಂತಸಿಂಗ್ ಬರೆಯುತ್ತಾರೆ ''ನಾನು ಜಗತ್ತಿನಲ್ಲಿ ಏನು ಬೇಕಾದರೂ ಸಾಧ್ಯವಾಗಬಹುದು. ಯಾವ ಸುಳ್ಳನ್ನು ಬೇಕಾದರೂ ಸತ್ಯವೆಂದೇ ಸಾಧಿಸಬಹುದು ಯಾವ ಸತ್ಯವನ್ನೂ ಸುಳ್ಳಾಗಿಸಬಹುದು, ಆದರೆ ಅವಳಿ-ಜವಳಿ ಮಕ್ಕಳ ಅಪ್ಪಂದಿರು ಬೇರೆ ಬೇರೆ ಎನ್ನುವುದಕ್ಕಾಗುವುದಿಲ್ಲವೆಂದೇ ಇದು ವರೆವಿಗೂ ತಿಳಿದಿದ್ದೆ. ಆದರೆ ಇಂಗ್ಲೇಡಿನ ವಿಜ್ಞಾನಿಗಳು ಅವಳಿ ಮಕ್ಕಳ ಅಪ್ಪಂದಿರೂ ಬೇರೆ ಬೇರೆಯಾಗಿರುವ ಸಾಧ್ಯತೆಯನ್ನು ಪತ್ತೆ ಹಚ್ಚಿದ್ದಾರೆ. ಬೆಳಗಿನ ಝಾವ ಗಂಡನನ್ನು ಕೂಡಿದ ಹೆಣ್ಣು, ಸ್ವಲ್ಪವೇ ಸಮಯದಲ್ಲಿ ಮನೆಗೆ ಹಾಲು ತಂದು ಕೊಡುವ ಕೌಬಾಯನ್ನೂ ಕೂಡಿದಾಗ ಇಂಥ ಅವಳಿಗಳು ಹುಟ್ಟುತ್ತಿದ್ದವು ಇವಕ್ಕೆ 'ಕೌಬಾಯ್ ಟ್ವಿನ್ಸ್'ಎನ್ನುತ್ತಾರೆ ಎಂದು ಓದಿ ಆಶ್ಚರ್ಯವಾಯಿತು' ಎಂದು ಬರೆದಿದ್ದಾರೆ. ಅಂದರೆ ಹೆಣ್ಣಿನ ಮಾತೃ ಸ್ಥಾನವನ್ನು ಎಷ್ಟು ಭ್ರಷ್ಟಗೊಳಿಸಬಹುದೋ ಅಷ್ಟೂ ಸಾಧ್ಯತೆಗಳ ಕಡೆ ಚಾಚುವ ಹುನ್ನಾರವೇ ಇದು.

ಅಯ್ಯಪ್ಪನ ಕಥೆಯೂ ಇಂಥದೇ ಒಂದು ಹುನ್ನಾರದ ಕಥೆ. ಈ ಮೇಲಿನ ಕಥೆ ಮಾತೃಸ್ಥಾನವನ್ನು ಅವಮಾನಿಸುವುದಾರೆ, ಅಯ್ಯಪ್ಪನ ಕಥೆ ಮಾತೃಸ್ಥಾನವನ್ನು ತಿರಸ್ಕರಿಸುವುದು. ರಾಕ್ಷಸ ಭಸ್ಮಾಸುರ ಶಿವನನ್ನು ಮೆಚ್ಚಿಸಿಕೊಂಡು 'ತಾನು ಯಾರ ತಲೆಯ ಮೇಲೆ ಕೈಯಿಡುತ್ತೇನೋ ಅವರು ಭಸ್ಮವಾಗಲಿ' ಎನ್ನುವ ವರ ಪಡೆದು ಎಲ್ಲರನ್ನೂ ಸುಡುತ್ತಾ ಬಂದ. ಜೀವ ಕೋಟಿ ತತ್ತರಿಸಿತು. ಶಿವನಿಗೆ ಮೊರೆ ಹೋಯಿತು. ಈ ದೇವತೆಗಳ ಶಕ್ತಿಯೇ ವಿಚಿತ್ರ ವರ ಕೊಡುತ್ತಾರೆ. ಅದನ್ನು ವಾಪಸ್ ಪಡೆಯಲು ಬರುವುದಿಲ್ಲ. ಶಿವ ವಿಷ್ಣುವಿನ ಮೊರೆ ಹೋದ. ವಿಷ್ಣುವಿಗೆ ಮೋಹಿನಿ ವೇಷ ಹಾಕುವ ರೂಢಿ ಇತ್ತಲ್ಲ? (ಸಮುದ್ರ ಮಥನದ ಸಮಯದಲ್ಲಿ ರಾಕ್ಷಸರಿಗೆ ಅಮೃತ ಸಿಕ್ಕದ ಹಾಗೆ ದೇವತೆಗಳಿಗೆ ಮಾತ್ರ ಅಮೃತ ಬಡಿಸಿದ್ದು ಇದೇ ಮೋಹಿನಿ ವೇಷದ ವಿಷ್ಣು ) ಮೋಹಿನಿಯಾದ. ನೃತ್ಯದ ನೆವದಲ್ಲಿ ಭಸ್ಮಾಸುರ ತನ್ನ ತಲೆಯ ಮೇಲೆ ತಾನೇ ಕೈ ಇಟ್ಟುಕೊಳ್ಳುವಂತೆ ಮಾಡಿ ಅವನು ಭಸ್ಮವಾಗುವಂತೆ ಮಾಡಿದ. ಆದರೆ ಈ ಶಿವನಿಗೆ ಆ ಮೋಹಿನಿಯ ರೂಪ ಮೋಹಪರವಶನನ್ನಾಗಿಸಿತು ಅವನು ಹೆಣ್ಣು ವೇಶದ ಗಂಡು ಎನ್ನುವುದನ್ನೂ ಮರೆತು ಅವನ ಸಾಂಗತ್ಯಕ್ಕೆ ದುಂಬಾಲು ಬಿದ್ದು, ಮೋಹಿನಿಯನ್ನು ಕೂಡಿದ. ಆಗ ಅಯ್ಯಪ್ಪ ಹುಟ್ಟಿದ ಎನ್ನುವುದು ಪುರಾಣ. ಗಂಡಿನಲ್ಲಿ ಗರ್ಭಕೋಶ ಇದೆಯೇ ಈ ಹುಟ್ಟು ಸಾಧ್ಯವೇ ಈ ಎಲ್ಲ ಪ್ರಶ್ನೆಗಳು ಅಪ್ರಸ್ತುತ. ಇದು ದೇವಾನು ದೇವತೆಗಳ ಕಥೆ. ಇಲ್ಲಿ ಎಲ್ಲವೂ ಸಾಧ್ಯ. ಇದು ನಂಬಿಕೆ. ಅಯ್ಯಪ್ಪನ ಹುಟ್ಟಿಗೇ ಹೆಣ್ಣಿನ ಹಂಗಿಲ್ಲ! ಇನ್ನು ದೇವಾಲಯಕ್ಕೆ ಯಾಕೆ ಹೆಣ್ಣು ಪ್ರವೇಶಿಸ ಬೇಕು? ಇಲ್ಲಿಯ ಸೂಕ್ಷ್ಮ ಗಮನಿಸಿ ಋತುಮತಿಯಾಗದ ಮತ್ತು ಋತುಮನಿಗಿಂತ ಹೆಣ್ಣಿಗೆ ಇಲ್ಲಿ ಪ್ರವೇಶವಿದೆ. 'ಮಡಿ'ಯ ಹೆಸರಿನಲ್ಲಿ ಋತು ಚಕ್ರ ಎದುರಿಸುವ ಮಹಿಳೆ ಇಲ್ಲಿ ಧರ್ಮ ಬಾಹಿರಳು!! ಇದು ಒಟ್ಟಾರೆಯಾಗಿ ಗರ್ಭದ ತಿರಸ್ಕಾರವೇ. ಇಲ್ಲಿ ಪೂಜೆ ಮಾಡುವ ಮತ್ತು ಇಲ್ಲಿಗೆ ವ್ರತ ಹಿಡಿದು ಬರುವ ಎಲ್ಲ ಜೀವ ಕೋಟಿಗಳೂ ಒಂಭತ್ತು ತಿಂಗಳು ಇದೇ ಗರ್ಭ ಚೀಲದಲ್ಲಿ ಹುದುಗಿದ್ದರಿಂದಲೇ ಅವರಿಗೆ ಅವತರಿಸುವುದು ಸಾಧ್ಯವಾಯಿತು ಎನ್ನುವ ಸತ್ಯ ಇಲ್ಲಿ ಬೇಕಿಲ್ಲ.

ಸೂಕ್ಷ್ಮಮತಿ ಮತ್ತು ಛಲವಂತ ಮಹಿಳೆಯರ ಮುಂದೆ ಇಂದು ಅನೇಕ ಪ್ರಶ್ನೆಗಳು 'ಗಂಡು ನಿರ್ಮಿಸಿದ ಈ ಧರ್ಮ ಮತ್ತು ದೇವರು ನಮಗೂ ಬೇಕೇ? ಬೇಡವೇ? ಬೇಡವೆಂದರೆ ಬಾಳಿನ ನಂಬಿಕೆಗೆ ಇರುವ ಪರ್ಯಾಯ ಮಾರ್ಗಗಳು ಯಾವುವು? ಹೀಗೇ ಇನ್ನೂ ಏನೇನೋ'. ''ಗಂಡಿನ ಹೊಟ್ಟೆಯಲ್ಲಿ ಹುಟ್ಟಿದ ಈ ಗಂಡು ದೇವರು ನಮಗೆ ಬೇಕೇ ಇಲ್ಲ , ನಮಗೆ ಮಾರಮ್ಮ ಬೀರಮ್ಮ, ಲಕ್ಷ್ಮೀ, ಪಾರ್ವತಿಯರು ಬೇಕಾದಷ್ಟಿದ್ದಾರೆ. ನಾವೇ ಗಂಡಿನ ಹಂಗಿಲ್ಲದೇ ಹುಟ್ಟಿದ ಹೆಣ್ಣು ದೇವತೆಯನ್ನು ಸೃಷ್ಟಿಮಾಡಿಕೊಂಡು. ಅಲ್ಲಿ ಗಂಡಿಗೆ ಪ್ರವೇಶವನ್ನೇ ನೀಡದೆ ಪೂಜೆ ಮಾಡುತ್ತೇವೆ'' ಎಂದೆಲ್ಲಾ ಈ ಮಹಿಳೆಯರು ಹಾರಾಡಬಹುದು. ಇವೆಲ್ಲಾ ವಾದಕ್ಕಾಗಿವಾದ ಅಷ್ಟೆ. ಈ ಎಲ್ಲ ಪ್ರಸಂಗಗಳನ್ನೂ ಮತ್ತು ವಾದ ವಿವಾದಗಳನ್ನೂ ಗಮನಿಸಿದರೆ ನಮ್ಮ ಮುಂದೆ ನಿಲ್ಲುವುದು ಎರಡೇ ಅಂಶ. ಮಾತೃಸ್ಥಾನ ಎಲ್ಲಿಯವರೆಗೆ ಗಂಡನ್ನು ಕೆಣಕ ಬಹುದು ಎನ್ನುವ ಪ್ರಶ್ನೆ!! ಇದಕ್ಕಾಗಿ ಅವನು ಏನೇನು ಕಥೆಗಳನ್ನು ಕಟ್ಟಬಹುದು ಎನ್ನುವ ಕುತೂಹಲ!!.

# ಮಾದಕ ವಸ್ತುಗಳು ಮಕ್ಕಳ ಆಟಿಕೆಯಲ್ಲ!

ಯುವಜನಾಂಗ ಮಾದಕ ವಸ್ತುಗಳ ಸೇವನೆಯ ಚಟಕ್ಕೆ ಗುರಿಯಾಗುತ್ತಿರುವುದು ಇಂದು ಜಗತ್ತಿನ ಅತ್ಯಂತ ಆತಂಕಕಾರಿ ಬೆಳವಣಿಗೆ. ಸಿರಿಂಜ್ ಮೂಲಕ ಜಗತ್ತಿನಾದ್ಯಂತ ಲಕ್ಷಾಂತರ ಯುವ ಜನತೆ ಮಾದಕ ದ್ರವ್ಯ ತೆಗೆದುಕೊಳ್ಳುತ್ತಾ ಅರಿವಿಲ್ಲದಂತೆ ಹೆಚ್‌ಐವಿ ಸೋಂಕಿಗೆ ಬಲಿಯಾಗುತ್ತಿದ್ದಾರೆ. ಇದು ಅತ್ಯಂತ ಅಪಾಯಕಾರಿ ಸಾಮಾಜಿಕ ಪಿಡುಗು. ಭಾರತದಲ್ಲಿನ ಶೇಕಡ 2.24 ರಷ್ಟು ಹೆಚ್‌ಐವಿ ಪ್ರಕರಣಗಳು ಈ ದುರಭ್ಯಾಸದ ಪರಿಣಾಮವಾಗಿವೆ.

★ ಅಧ್ಯಯನಗಳ ಪ್ರಕಾರ ಎಲ್ಲಾ ವಯಸ್ಸಿನ ಮಕ್ಕಳು ಮಾದಕ ವಸ್ತುಗಳ ದುರುಪಯೋಗ ಮತ್ತು ಸಾಗಾಣಿಕೆಗೆ ತುತ್ತಾಗುತ್ತಿದ್ದಾರೆ. ಇಂಥ ಮಕ್ಕಳು ದುಶ್ಚಟ ಹಾಗೂ ಆತಂಕಕಾರಿ ನಡವಳಿಕೆಯನ್ನು ಬೆಳೆಸಿಕೊಳ್ಳುತ್ತಾರೆ.

★ ಅನೇಕ ಸಂದರ್ಭಗಳಲ್ಲಿ ಹಿರಿಯರೂ ಸಹ ಮಾದಕ ವ್ಯಸನಿಗಳಾಗಿದ್ದು ಅಂತಹವರ ಮಕ್ಕಳು ಅನಾಥರಾಗುತ್ತಿದ್ದಾರೆ.

★ ಶಾಲೆ/ಕಾಲೇಜುಗಳೂ ಈ ಸಮಸ್ಯೆಗೆ ಹೊರತಾಗಿಲ್ಲ. ಸಮಾನ ವಯಸ್ಕ ಗುಂಪಿನಲ್ಲಿರುವವರು ಮೊದಲಿಗೆ ಧೂಮಪಾನ, ಮಧ್ಯಪಾನಕ್ಕೆ ನಂತರ ಅಪಾಯಕಾರಿ ಮಾದಕ ಪದಾರ್ಥಗಳಿಗೆ ಬಲಿಯಾಗಿ ವ್ಯಸನಿಗಳಾಗುತ್ತಾರೆ.

★ ಇದನ್ನು ತಪ್ಪಿಸಲು ತಂದೆ-ತಾಯಿಯರು, ಶಿಕ್ಷಕರು, ಸಮಾಜ ಸೇವಕರು ಹಾಗೂ ಸಂಘ ಸಂಸ್ಥೆಗಳ ಮೇಲೆ ಮಹತ್ತರವಾದ ಜವಾಬ್ದಾರಿಯಿದೆ. ನಿಮ್ಮ ಪ್ರೀತಿ, ಆರೈಕೆ ಹಾಗೂ ಸೂಕ್ತ ಮಾರ್ಗದರ್ಶನಗಳಿಂದ ಈ ಪಿಡುಗನ್ನು ತಡೆಗಟ್ಟಬಹುದು.

**ಮಕ್ಕಳು ಅಮಲಿನ ಬದುಕಿಗೆ ಬಲಿಯಾಗದಂತೆ**
**ತಡೆಯುವುದು ನಮ್ಮ ನಿಮ್ಮೆಲ್ಲರ ಜವಾಬ್ದಾರಿ**

ಸುವರ್ಣ ಕರ್ನಾಟಕದ ವರ್ಷ

**2006 - 07**



ಕರ್ನಾಟಕ ವಾರ್ತೆ
Karnataka Information

